# ರಥಸಪ್ತಮಿ
# ಮತ್ತು
# ಇತರ ಚಿತ್ರಗಳು

ಪು. ತಿ. ನರಸಿಂಹಾಚಾರ್








ಮೈಸೂರು
ಕಾವ್ಯಾಲಯ : : ಪ್ರಕಾಶಕರು

*Rathasaptami Mattu Itara Chitragalu* (Rathasaptami and other sketches). A collection of eight reflective essays in Kannada. By P. T. Narasimhachar. First Published in 1945. By Kavyalaya Publishers, Mysore-9 (570009). Reissued 1955, 1973.





ಮುದ್ರಕರು
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್
ಮೈಸೂರು

## ಅರಿಕೆ

ಇಲ್ಲಿರುವ ಎಂಟು ಬಂಧಗಳಲ್ಲಿ ನಾಲ್ಕು ಈವರೆಗೆ 'ಪ್ರಬುದ್ಧ ಕರ್ಣಾಟಕ', 'ಜಯಕರ್ನಾಟಕ' ಮತ್ತು 'ಜೀವನ'—ಈ ಪತ್ರಿಕೆಗಳಲ್ಲಿ ಅಚ್ಚಾಗಿದ್ದವು. 'ನೌಕಾ ಚಂದ್ರ' ಎಂಬುದು 'ಸುಳವು ಹೊಳವು' ಎಂಬ ಪ್ರಬಂಧ ಸಂಗ್ರಹದಲ್ಲಿಯೂ ಬಂದಿತ್ತು. ಕೊನೆಯ ಮೂರು ಇತ್ತೀಚೆಗೆ ಬರೆದವು. ಇವಕ್ಕೂ ಮಿಕ್ಕ ಐದಕ್ಕೂ ಹತ್ತು ಹನ್ನೆರಡು ವರ್ಷಗಳ ಅಂತರವಿದೆ. ಅದರಿಂದ ಶೈಲಿಯಲ್ಲಿಯೂ ನಿರೂಪಣಕ್ರಮದಲ್ಲಿಯೂ ಸ್ವಲ್ಪ ವ್ಯತ್ಯಾಸ ಸಹಜವಾಗಿ ಕಂಡುಬರುತ್ತದೆ.

ಇವನ್ನು ಪುಸ್ತಕರೂಪದಲ್ಲಿ ಹೀಗೆ ಸಂಗ್ರಹಿಸಬೇಕೆಂಬ ಬಯಕೆ ನನಗಿಂತಲೂ ಹೆಚ್ಚಾಗಿ ಶ್ರೀ ಚಿದಂಬರಂ ಅವರಿಗೆ ಇದ್ದುದರಿಂದ ಈ ಕಾರ್ಯ ಇಂತು ನೆರವೇರಿದೆ. ಎಲ್ಲ ಬಂಧಗಳೂ ಅಂತಃಸ್ಫೂರ್ತಿಯಿಂದ ಬಂದವಾದರೂ ಶ್ರೀ ಚಿದಂಬರಂ ಅವರ ಸಂತತ ಪ್ರೋತ್ಸಾಹವಿರದಿದ್ದರೆ ಕೊನೆಯ ಮೂರನ್ನು ನಾನು ಈ ವೇಳೆಗೆ ರಚಿಸುತ್ತಿರಲಿಲ್ಲ. ಈ ಸಂಗ್ರಹದ ಎಲ್ಲ ಶ್ರೇಯಸ್ಸು ಅವರ ಉತ್ಸಾಹಕ್ಕೂ ಪ್ರೀತಿಗೂ ಸಲ್ಲತಕ್ಕದ್ದಾಗಿದೆ.

ಪು. ತಿ. ನ.

## ಕೃತಜ್ಞತೆ

ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ಅಭ್ಯಾಸಮಂಡಲಿಯ ಸದಸ್ಯರೂ ಮತ್ತು ಅಧ್ಯಕ್ಷರಾದ ಪ್ರೊ|| ಸಿ. ಕೆ. ದೀಕ್ಷಿತರು ಈ ಗ್ರಂಥವನ್ನು ಅಲ್ಲಿಯ ಪಿ.ಯು.ಸಿ. ತರಗತಿಗೆ ಪಠ್ಯವಾಗಿ ನೇಮಿಸಿ ಈ ಮುದ್ರಣಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ. ಅವರಿಗೆ ನಮ್ಮ ವಂದನೆಗಳು. ಮಿತ್ರರಾದ ಶ್ರೀ ಪು. ತಿ. ನರಸಿಂಹಾಚಾರ್ಯರು ಎಂದಿನಂತೆ ವಿಶ್ವಾಸದಿಂದ ಈ ಕೃತಿಯನ್ನು ಕಾವ್ಯಾಲಯದಿಂದ ಪ್ರಕಟಿಸಲು ಅನುಮತಿಯಿತ್ತು ಉಪಕಾರ ಮಾಡಿದ್ದಾರೆ. ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಶ್ರೀ ಜಿ. ಹೆಚ್. ಕೃಷ್ಣಮೂರ್ತಿಗಳ ಶ್ರದ್ಧಾಸಕ್ತಿಗಳಿಂದ ಪುಸ್ತಕ ಶೀಘ್ರವಾಗಿ, ಚೆನ್ನಾಗಿ, ಅಚ್ಚಾಗಿ ಹೊರಬರುತ್ತಿದೆ. ಇವರಿಬ್ಬರಿಗೂ ನಮ್ಮ ವಂದನೆಗಳು.

ಪ್ರಕಾಶಕರು

# ವಿವರ

# ಗೋಕುಲಾಷ್ಟಮಿ

ಇಂದು ಗೋಕುಲಾಷ್ಟಮಿ. ಪುರಾಣ ಪುರುಷನೂ ಮಹಾಭಾರತ ವ್ಯಕ್ತಿಯೂ ಆದ ಗೀತಾಚಾರ್ಯನವತರಿಸಿದ ಪವಿತ್ರತಮವಾದ ದಿನವಿಂದು. ನಮಗಂತೂ ದೊಡ್ಡ ಹಬ್ಬ. ಅರ್ಧರಾತ್ರಿಯಾಗಿದೆ. ಅಷ್ಟಮಿಚಂದ್ರನು ಈಗ ತಾನೆ ಮೂಡಲಿಲ್ಲ ಮೈದೋರಿದ್ದಾನೆ. ಬಾನಿನಲ್ಲಿ ಮೋಡವಾಡಿ ಹನಿಯುತ್ತಿದೆ. ಸಾವಿರಾರು ವರ್ಷಗಳ ಹಿಂದೆ ಇಂಥ ವೇಳೆಯಲ್ಲೇ ಲೋಕೋದ್ಧಾರಕ್ಕಾಗಿ ಸೆರೆಮನೆಯಲ್ಲಿ ಪರಮಾತ್ಮನುದಿಸಿದನಂತೆ. ಅಂದು ಮೊದಲು ಇಂದಿನವರೆಗೂ ಪ್ರತಿ ವರ್ಷದಲ್ಲೂ ಪ್ರತಿ ಮನೆಯಲ್ಲೂ, ಪ್ರತಿ ಕುಟುಂಬದಲ್ಲೂ ಕೃಷ್ಣ ಹುಟ್ಟುತ್ತಿರುತ್ತಾನೆ. ಇದು ಸುಳ್ಳಲ್ಲ, ನಿಜ. ಇಂದು ನಮ್ಮ ಮನೆಯಲ್ಲೂ ಕೃಷ್ಣ ಹುಟ್ಟಿದನು. ನನಗೆ ಈ ವಿಚಾರದಲ್ಲಿ ಮೊದಲು ಅಷ್ಟು ನಂಬಿಕೆ ಇರಲಿಲ್ಲ. ಐದಾರು ವರ್ಷಗಳ ಹಿಂದೆ ನಮ್ಮ ಕಿಟ್ಟುವನ್ನು "ಕೃಷ್ಣ ಎಲ್ಲಿ ಹುಟ್ಟಿದ, ಮಗು ?" ಎಂದು ಕೇಳಿದೆ. "ಅಲ್ಲಿ" ಎಂದು ಅದು 'ಫಲವಸ್ತ್ರ'ದ ಕಡೆಗೆ ಕೈ ತೋರಿಸಿತು. ಅದರ ಆಟದ ತೊಟ್ಟಿಲನ್ನು ನಾವು 'ಫಲವಸ್ತ್ರ'ದ ಚಪ್ಪರಕ್ಕೆ ಒಂದು ಹಣ್ಣಿನಂತೆಯೇ ಕಟ್ಟಿ ತೂಗುಬಿಟ್ಟಿದ್ದೆವು. ಆ ತೊಟ್ಟಿಲಿನಲ್ಲಿ ಅದರ ಅಂಬೆಗಾಲು ಕೃಷ್ಣನನ್ನು ಕುಳ್ಳಿರಿಸಿದ್ದೆವು. ಕೆಳಗೆ ಇನ್ನೊಂದು ತೂಗುತೊಟ್ಟಿಲಲ್ಲಿ ನಮ್ಮ ಮನೆಯ ಮಡಿ ಕೃಷ್ಣನನ್ನು ಅಲಂಕರಿಸಿ ತಂದೆಯವರು ಬಿಜಯ ಮಾಡಿಸಿದ್ದರು. ಹಣತೆಯೊಂದರ ಬೆಳಕು ಈ ಮಡಿ ಕೃಷ್ಣನ ಮೇಲೆ ಬಿದ್ದು ಮೂರ್ತಿಯನ್ನು ಬೆಳಗಿತ್ತು. ಆದರೆ ಆ ಪ್ರಭೆ ಮೇಲೆ ತೊಂಗುತ್ತಿದ್ದ ಮಗುವಿನ ಕೈ ತೊಟ್ಟಿಲಿನ ತಳವನ್ನು ಮಾತ್ರ ಮುಟ್ಟಿ ಅದರ ಬಾಲಕೃಷ್ಣನ ಮೇಲೆ ನೆಳಲನ್ನು ಚೆಲ್ಲಿತ್ತು. ಚಪ್ಪರದ ಮೇಲೆ ಬಿದ್ದು, 'ಫಲವಸ್ತ್ರ'ದ ನೆಳಲುಗಳೊಡನೆ ಹಾಸುಹೊಕ್ಕಾಗಿ ಬೆರೆದಿದ್ದ ಹಣತೆಯ ಮಾಸುಬೆಳಕು, ತೊಟ್ಟಿಲನ್ನು ಆವರಿಸಿದ್ದ ಮುಸುಕುಮುಸಕಾದ ಕತ್ತಲು, ಅದರ ಹೊರಗಡೆಯಲ್ಲೂ ತಳಭಾಗದಲ್ಲೂ ಹರಡಿದ್ದ ಪ್ರಭೆ, ಮಗುವಿನ ಅಂಬೆಗಾಲು ಕೃಷ್ಣ, ಅದರ ಭಾವಗರ್ಭಿತವಾದ ಮಾತು, ಇವೆಲ್ಲಾ ಒಟ್ಟಿಗೆ ಕಲೆತು ನನಗೊಂದು ನವೀನ ಭಾವವನ್ನು ತಂದುವು ; ಆ ಸನ್ನಿವೇಶಕ್ಕೆ ಒಂದು ಹೊಸ ಬೆಳಕನ್ನು ಬೀರಿದವು—ಒಂದು ಸೂತಿಕಾ ಗೃಹವನ್ನೂ ಅದರಲ್ಲಿ ದಿವ್ಯ ಶಿಶುವೊಂದರ ಪ್ರಾದುರ್ಭಾವವನ್ನೂ ಕಂಡೆ. "ಹೌದು, ಕೃಷ್ಣ ಹುಟ್ಟಿದಾನೆ, ನಿಜ. ಅದೋ ಅಲ್ಲಿ ; ಇಲ್ಲೂ." ಎಂದು

ಎದೆ ಮುಟ್ಟಿಕೊಂಡೆ. ಅಂದು ಮೂಡಿದ ನಂಬಿಕೆ ಇನ್ನೂ ಅಳಿದಿಲ್ಲ.

ಈ ಮಹಾವ್ಯಕ್ತಿಗೆ ಸ್ವಾಗತವಿತ್ತು, ಅರ್ಘ್ಯಕೊಟ್ಟು, ಪೂಜೆ ಸಲಿಸುವ ಅಧಿಕಾರ ನನಗೊದಗಿದುದು ಈ ವರ್ಷವೇ. ಹೋದ ವರ್ಷದವರೆಗೂ ನಾನೊಂದು ದೊಡ್ಡ ಸಂಸಾರದ ಮಗನಾಗಿದ್ದೆ. ಈ ವರ್ಷ ಅಂದರೆ ನಾನು ನಮ್ಮೂರನ್ನು ಬಿಟ್ಟು ಬೆಂಗಳೂರಿನಲ್ಲಿ ಸಂಸಾರ ಹೂಡಿದಂದಿನಿಂದ ನಾನೊಂದು ಕುಟುಂಬದ ತಂದೆ, ಒಂದು ಮನೆಗೆ ಯಜಮಾನ. ಇಂದು ನಮ್ಮ ಮನೆಯಲ್ಲೂ ಕೃಷ್ಣಜನನವಾಗಬೇಕು. ಈ ಉತ್ಸವವನ್ನು ಹೇಗೆ ನಿರ್ವಹಿಸಬೇಕು ಎಂದು ನನಗೆ ತಿಳಿಯದು. ಆ ಗೌರವವನ್ನು ವಹಿಸುವ ಸಾಮರ್ಥ್ಯ ನನ್ನಲ್ಲಿಲ್ಲವೆಂದು ನಾನು ತೀರ ಭಯಗೊಂಡೆ. ನಾವಿಬ್ಬರೂ ಅರಿಯದವರು. ಆಚಾರ ವ್ಯವಹಾರ ತಿಳಿದವರಲ್ಲ. ದೊಡ್ಡ ದೊಡ್ಡ ತಿಂಡಿಗಳನ್ನು ಮಾಡಿ ನಿವೇದಿಸಿ ದೇವನನ್ನೊಲಿಸಲು ಆಕೆ ಬಲ್ಲವಳಲ್ಲ. ಇಬ್ಬರೂ ಉಪವಾಸವಿದ್ದೆವು. ಬಿಮ್ಮೆನ್ನದಿರಲಿ ಎಂದು, ಒಂದು ಗಳುವನ್ನು ಸೀಳಿ ಹಂದರ ಬಿಗಿದು ಒಂದು ಸಣ್ಣ 'ಫಲವಸ್ತ್ರ'ದ ಚಪ್ಪರ ಕಟ್ಟಿದೆವು. 'ಫಲವಸ್ತ್ರ'ಕ್ಕೆ ಸೀಬೆಹಣ್ಣು, ಸೌತೆಕಾಯಿ, ದಾಳಿಂಬೆ ಹೀಚು, ಯಥೇಚ್ಛವಾಗಿ ಮಾವಿನ ಸೊಪ್ಪು ಇವನ್ನು ಕಟ್ಟಿದೆವು. ನಮ್ಮ ಮಗುವಿನ ಬಣ್ಣದ ಕೈತೊಟ್ಟಿಲನ್ನು ಈ ಚಪ್ಪರದ ಕೆಳಗೆ ತೂಗುಬಿಟ್ಟು ಅದರಲ್ಲಿ ಅದರ ಕೃಷ್ಣನನ್ನೆ ಪೂಜೆಗಿಟ್ಟೆವು. ಸಂಜೆಯಲ್ಲಿ ಮಿಂದು ಮಡಿಯುಟ್ಟು ಗೀತೆಯನ್ನು ಪಾರಾಯಣ ಮಾಡಿದೆ. ಸಹಸ್ರನಾಮವನ್ನು ಹೇಳಿ ಹೂ ತುಳಸಿಯಿಂದ ಅರ್ಚಿಸಿದೆ. ಹಾಲಿನ ಅರ್ಘ್ಯ ಕೊಟ್ಟೆ. ನವನೀತವನ್ನು ನಿವೇದಿಸಿದೆ. ಈ ಪೂಜೆ ಶಾಸ್ತ್ರಸಮ್ಮತವೋ ಅಲ್ಲವೋ ನನಗೆ ತಿಳಿಯದು. ಅವನಿಗೆ ಸಂದಿತೋ ಇಲ್ಲವೋ ಅದನ್ನೂ ನಾನರಿಯೆ; ಸಂದಿರಬಹುದು. "ಪತ್ರಂ ಪುಷ್ಪಂ ಫಲಂ ತೋಯಂಯೋ ಮೇ ಭಕ್ತ್ಯಾ ಪ್ರಯಚ್ಛತಿ। ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ"॥ ಎಂದು ಗೀತೆಯಲ್ಲಿ ಆತನೇ ಅಪ್ಪಣೆ ಕೊಡಿಸಿದಾನೆಯಲ್ಲ. ನನ್ನ ಈ ಪೂಜೆಗೆ ಅವನು ಮೆಚ್ಚಿರದಿದ್ದರೆ, ನಮ್ಮ ಪುಟ್ಟು ಅದರ ತಾಯಿ ಇಬ್ಬರೂ ಸೇರಿ ಎತ್ತಿದ ಆರತಿಗೂ, ಹೇಳಿದ ಹಾಡಿಗೂ, ಅವನೊಲಿದಿರಬೇಕು. ಆ ಪೂಜೆ ಅವನಿಗೆ ಸಂದಿರಬೇಕು. ಇಲ್ಲದಿದ್ದರೆ ಗೀತೆಯ ಮಾತು ಸುಳ್ಳಾಗಬೇಕಲ್ಲ.—

ಹೀಗೆ ನಮ್ಮ ಪೂಜೆ ಸಲಿಸಿ, ಈಗತಾನೆ ಇಲ್ಲಿ ಬಂದು ಕುಳಿತಿದೇನೆ. ಆತ್ಮವು ಹಗುರವಾಗಿ ಶಾಂತಿಯಲ್ಲಿ ತೇಲುತ್ತಿದೆ. ಬಗೆಯಲ್ಲಿ ಒಂದು ನೂತನ ಹರ್ಷ ಮೂಡಿದೆ. ಬಾಳು ಪುನೀತವಾಯಿತೆಂಬ ಅನುಭವ ಉದಿಸಿದೆ.

ಆತನ ವ್ಯಕ್ತಿತ್ವವಿಂದು ನನ್ನ ಮನಸ್ಸಿನ ಮೇಲೆ ಒತ್ತುತ್ತಿದೆ. ದಿವ್ಯ ಪ್ರಾದುರ್ಭಾವವೊಂದರ ಅರಿವುಂಟಾಗಿದೆ. ಅಪೂರ್ವವಾದ ಅನುಭವವಿದು. ಸ್ಪರ್ಶಮಣಿಯು ಕ್ಷುದ್ರಲೋಹವೊಂದಕ್ಕೆ ಸೋಕುವಂತೆ ಈ ಅನುಭವವು ನನ್ನ ಬಾಳನ್ನು ಸೋಕಿ ಅದನ್ನು ಮಾರ್ಪಡಿಸಿದೆ. ಈ ಭಾವದ ಮಾತೃಕೆ ಯಾವುದೋ ಕಾಣೆ. ಈ ಪವಿತ್ರವಾದ ದಿನದ ವಾತಾವರಣವೇನು? ಪೂಜೆಯಲ್ಲಿ ನನ್ನಾತ್ಮವನ್ನು ಪರಮಾತ್ಮನಿಗೆ ನಿವೇದಿಸಿದ ಭಾವವೇನು? ಗೀತೆಯ ಪುಣ್ಯವಾಹಿನಿಯಲ್ಲಿ ಸ್ನಾನಮಾಡಿದುದರ ಫಲವಾಗಿ ಸಂಸಾರ ಮಲಮೋಚನವಾದುದರ ಅನುಭವವೇನು? ಅಥವಾ ಆ ಕೂಸಿನ ನಗೆಯ ಪ್ರಭಾವವೋ? ಎಂತಹ ಪುಟ್ಟ ಮುದ್ದು ಮಗು ಅದು! ಅರಳಿದ ಕಣ್ಣುಗಳು—ನಗೆಯಿಂದ ಕಳೆಗೊಂಡ ಕಣ್ಣುಗಳು; ದುಂಡುಮುಖ—ಸುಳಿಗುರುಳಿನಿಂದ ಸಿಂಗಾರಗೊಂಡ ಮುಖ; ದುಂಡು ಮೈ; ಪುಟ್ಟ ದುಂಡು ಕೈ; ದುಂಡುದುಂಡಾದ ಕಾಲುಗಳು; ತಾಳೆ ಹೂವಿನಂತೆ ಬಣ್ಣ; ನಮ್ಮ ನೆರೆಮನೆಯ ಮೊಲೆಗೂಸದು. ಯಾವ ಸ್ಫೂರ್ತಿಯಿಂದಲೋ ಕಾಣೆ, ನಮ್ಮಾಕೆ ಅದನ್ನೆತ್ತಿಕೊಂಡು ಬಂದು ನಾನು ಗೀತಾಪಾರಾಯಣ ಮಾಡುತ್ತಿದ್ದಾಗ ನನ್ನ ಮುಂದೆ ಮಲಗಿಸಿದ್ದಳು. ಹನ್ನೊಂದನೆಯ ಅಧ್ಯಾಯವನ್ನು ಓದುತ್ತಾ ಓದುತ್ತಾ ವಿಶ್ವರೂಪ ದರ್ಶನದ ವರ್ಣನೆಯನ್ನು ಆತ್ಮೀಕರಿಸಿ ಆ ವಿರಾಟ್-ಮೂರ್ತಿಗೆ ಭಯಗೊಂಡು ಪುಸ್ತಕದಿಂದ ದೃಷ್ಟಿಯನ್ನು ಮೇಲಕ್ಕೆತ್ತಿದೆ. ಈ ಮಗು ಕಣ್ಣಿಗೆ ಬಿತ್ತು. ಕಾಲುಗಳನ್ನು ಗಾಳಿಯಲ್ಲಿ ಹೊಡೆದು, ಕೈಗಳನ್ನು ನೆಲಕ್ಕೆ ಬಡಿದು, ತಲೆಯನ್ನು ಮೇಲಕ್ಕೆತ್ತಿ, ಹೊಟ್ಟೆಯಮೇಲೆ ತೆವಳುವುದಕ್ಕೆ ಯತ್ನಮಾಡುತ್ತಾ, ಆ ಕೂಸು ಕೇಕೆ ಹಾಕಿ ನಗುತ್ತಿತ್ತು. ಆ ವಿಶ್ವಮೂರ್ತಿಯೇ ತನ್ನ ವಿರಾಟ್-ಸ್ವರೂಪವನ್ನು ಕನಿಕರದಿಂದ ಸಂಕುಚಿಸಿಕೊಂಡು ಈ ಮಗುವಾಗಿದಾನೆಂದು ನನಗೆ ತೋರಿತು. ಮಗುವನ್ನು ನೋಡಿದೆ: ಹರ್ಷವೇ—ಸೌಗ್ಧ್ಯವೇ—ಅಲ್ಲ ಪುಣ್ಯವೇ ರೂಪು ತಳೆದು—ದೇಹವೆತ್ತಿ—ಚೈತನ್ಯಗೊಂಡು ಈಗ ಶಿಶುವಾಗಿ ಬಂದಿದೆ ಎಂದುಕೊಂಡೆ. ಅಪೂರ್ವವಾದೊಂದು ಸುಖದ ಅನುಭವವಾಯಿತು. ಗೀತೆಯನ್ನು ಕೆಳಗಿಟ್ಟು ಮಗುವನ್ನೆತ್ತಿಕೊಂಡು ಮುತ್ತಿಡುವುದಕ್ಕೆ ಹೊರಟೆ. ಮುಟ್ಟಲೂ, ಮುತ್ತಿಡಲೂ ಭಯವಾಯಿತು. ಅದರ ನಿಸರ್ಗ ನೈರ್ಮಲ್ಯಕ್ಕೂ, ಅಪಾರ್ಥಿವ ಭಾವಕ್ಕೂ, ನನ್ನ ಸ್ಪರ್ಶ ಕುಂದುತರುವುದೆಂಬ ಭಯ. ಕಣ್ತೆರೆಯ ನೋಡಿ "ಶ್ರೀ ಕೃಷ್ಣನ ಜನನವಾಯಿತು" ಎಂದುಕೊಂಡೆ.

ಈ ಚಿತ್ರದೊಡನೆ ಮನಸ್ಸಿಗೆ ಇನ್ನೂ ಅನೇಕ ನೆನಪುಗಳು ಅದಕ್ಕೆ ಕೊಂಡಿ

ಬಿದ್ದ ಹಾಗೆ ಸುಳಿಯುತ್ತವೆ. ಗೋಕುಲಾಷ್ಟಮಿಗೂ ಮಕ್ಕಳಿಗೂ, ಏನೋ ಒಂದು ಅಂತರ್ಯವಾದ ಸಂಬಂಧವಿದೆ. ಕೃಷ್ಣನ ಯೌವನಕ್ಕಿಂತಲೂ ಶೈಶವ ವಲ್ಲವೆ ನಮ್ಮ ಮನಸ್ಸನ್ನು ಮೋಹಿಸಿರುವುದು; ಹೃದಯವನ್ನು ಸೆಳೆದಿರು ವುದು! ಮಕ್ಕಳೇ ನಮ್ಮಂಥ ನಾಸ್ತಿಕರಿಗೆ—ಆಸ್ತಿಕರಿಗೂ—ಶ್ರೀಕೃಷ್ಣ ಜನನ ವಾರ್ತೆಯನ್ನು ತರುವ ಹರಿಕಾರರು. ಶಿಶುಗಳಿಲ್ಲದೆ ಈ ದಿನಕ್ಕೆ ಕಳೆ ಬರುವುದಿಲ್ಲ; ಮನಸ್ಸಿಗೆ ಕೃಷ್ಣನುದಯವಾಯಿತೆಂಬ ನಂಬಿಕೆ ಹುಟ್ಟುವು ದಿಲ್ಲ. ನನ್ನ ನೆನಪಿನಲ್ಲಿ ಉಳಿದಿರುವ ಗೋಕುಲಾಷ್ಟಮಿಯ ಚಿತ್ರಗಳೆಲ್ಲವುಗಳ ಕೇಂದ್ರದಲ್ಲೂ ಅವುಗಳ ಆತ್ಮದಂತೆ ಹಸುಳೆಯೊಂದಿದೆ. ಹೋದ ವರುಷ ನನ್ನ ತಂಗಿಯ ಮಗು; ಅದರಾಚೆ ವರುಷ ನನ್ನ ತಮ್ಮನೊಬ್ಬ; ಅದರಾಚೆ ....ಹೋದವರುಷದ ಗೋಕುಲಾಷ್ಟಮಿ ಚಿತ್ರವನ್ನು ನಾನಿಲ್ಲೇಕೆ ಕೊಡ ಬಾರದು? ಅದು ನೆನಪಿನಲ್ಲಿ ಇನ್ನೂ ಉಜ್ವಲವಾಗಿದೆ. ಅದೊಂದನ್ನು ಹೇಳಿಬಿಟ್ಟರೆ ಸ್ಥಾಲೀಪುಲಾಕ ನ್ಯಾಯದಂತೆ ಮಿಕ್ಕವನ್ನೆಲ್ಲಾ ಹೇಳಿದ ಹಾಗೆ ಆಗುತ್ತದೆ.

ಹೋದವರುಷದ ಗೋಕುಲಾಷ್ಟಮಿ ಹಬ್ಬಕ್ಕೆ ನಾನು ನಮ್ಮೂರಿನಲ್ಲಿದ್ದೆ. ಆಗ ನಾನು ಒಂದು ದೊಡ್ಡ ಕುಟುಂಬದ ಮಗ ಮಾತ್ರ. ನನಗೆ ಪೂಜೆ ಗಧಿಕಾರವಿಲ್ಲ. ತಿಂಡಿಮಾಡುವ ಕಾರ್ಯದಲ್ಲಿ ಅಮ್ಮನಿಗೆ ನೆರವಾಗುವುದಕ್ಕೂ ನಾನು 'ಮಡಿ' ಅಲ್ಲ. ಆದರೆ 'ಫಲವಸ್ತ್ರ'ವನ್ನು ಕಟ್ಟುವುದಕ್ಕೆ ಅಧಿಕಾರ ವುಂಟು! ಅಲ್ಲಿ ನಾನು ನಿರಂಕುಶಪ್ರಭುತ್ವವನ್ನು ವಹಿಸಿದೆ. ನನ್ನ ತಮ್ಮಂದಿ ರಿಗೆ ತಮ್ಮ ವ್ಯಕ್ತಿಸ್ವಾತಂತ್ರ್ಯ ಅಳಿದುಹೋಯಿತಲ್ಲಾ ಎಂಬ ದುಃಖ— ಗೊಣಗುಟ್ಟುವುದಕ್ಕೆ ಮೊದಲು ಮಾಡಿದರು. ಆ ಮೇಲೆ ಸಲಹೆಗಳನ್ನು ಕೊಡುವುದಕ್ಕೆ ಪ್ರಾರಂಭಿಸಿದರು. "ಹುಡುಗರು, ನಿಮಗೆ ಅಂದವೇನು ಗೊತ್ತು? ಚಂದವೇನು ಗೊತ್ತು? ಸುಮ್ಮನೆ ಹಣ್ಣು ಕಾಯಿಗಳಿಗೆ ನಾರು ಬಿಗಿದುಕೊಡಿರೊ" ಎಂದೆ. ದೊಡ್ಡ ಮನೆ, ದೊಡ್ಡ ಹಜಾರ, ಹಜಾರಕ್ಕೆ ಸರಿಯಾದ ದೊಡ್ಡ 'ಫಲವಸ್ತ್ರ'ದ ಚಪ್ಪರ. ಈ ಚಪ್ಪರ ತುಂಬುವಂತೆ ನಮ್ಮ ತೋಟದಿಂದ ಸಾಮಾನುಗಳು ಬಂದಿದ್ದುವು. ಹೊಂಬಾಳೆ, ಅಡಕೆ, ಹುಣಸೆ, ಸೀತಾಫಲ, ರಾಂಫಲ, ನಿಂಬೆ, ಮಾದಲ, ಬಾಳೆಗೊನೆ, ಬಾಳೆಹಣ್ಣು, ಎಳ ನೀರು, ಇನ್ನೂ ಏನೇನೊ. ಆಮೇಲೆ ಇವುಗಳ ಜತೆಗೆ ಸೀಬೆಯ ಹಣ್ಣು, ಚಕ್ಕೋತನ ಹಣ್ಣು, ದಾಳಿಂಬೆ ಹೀಚು ಇವುಗಳನ್ನು ನನ್ನ ತಮ್ಮಂದಿರು ಯಾವುದೋ ಬೇಲಿ ಬಿದ್ದು ಮೈ ಕೈ ತರಿಸಿಕೊಂಡು ಕದ್ದು ತಂದಿದ್ದರು. ಕದ್ದು ತಂದ ಒಡವೆ ಕಳ್ಳ ಕೃಷ್ಣನಿಗೆ ಪ್ರೀತಿಯಂತೆ. ಇವನ್ನೆಲ್ಲಾ ಸಾಯಂ

ಕಾಲದ ಹೊತ್ತಿಗೆ ಆಯವರಿತು, ಹುಡುಗರ ಮನ ನೋಯದಂತೆ ಅವರ ಸಲಹೆಗಳನ್ನೂ ಮನ್ನಿಸಿ, ಚಪ್ಪರಕ್ಕೆ ನೇತುಹಾಕಿದೆ. "ಎಷ್ಟಾದರೂ ಪಟ್ಟಣದಲ್ಲಿದ್ದವನು, ನಾಜೋಕಾಗಿ ಕಟ್ಟಿದಾನೆ" ಎಂದರು ಅಮ್ಮ. ಅಪ್ಪ, ತಂಗಿ, ಇವರೂ ಮೆಚ್ಚಿದರು. ಒಟ್ಟಿನಲ್ಲಿ ಎಲ್ಲರಿಗೂ ತೃಪ್ತಿಯಾಯಿತೆಂದೇ ಹೇಳಬಹುದು.

ಗೋಕುಲಾಷ್ಟಮಿಯ ದಿನ 'ಫಲವಸ್ತ್ರ' ಕಟ್ಟುವವರೆಗೂ ಹುಡುಗರಿಗೆ ಕಾಲ ನೀರು ಕುಡಿದಂತೆ ಕಳೆದುಹೋಗುತ್ತದೆ. ಅಲ್ಲಿಂದ ಮುಂದೆ ರಾತ್ರಿ ಕೃಷ್ಣನಿಗೆ ಅರ್ಘ್ಯ ಕೊಡುವವರೆಗೂ ಕಾಲವನ್ನು ಕಳೆಯುವುದು ಅವರಿಗೆ ದುಸ್ತರವಾಗುತ್ತದೆ. ಅಲ್ಲಿಯತನಕ ಅವರು ಬಾಯಿಗೆ ಕುಕ್ಕೆ ಕಟ್ಟಿಕೊಂಡಿರಬೇಕು. ಅದರಲ್ಲೂ ಗೋಕುಲಾಷ್ಟಮಿಯ ದಿನ ಹುಡುಗರಿಗೆ ಹೊಟ್ಟೆತುಂಬ ಅನ್ನ ಹಾಕುವುದಿಲ್ಲ. ತಂಗಳನ್ನೊ ಉಪ್ಪಿಟ್ಟನ್ನೊ ತಿಂದುಕೊಂಡು ಅವರು ರಾತ್ರಿಯವರೆಗೂ ಜೀವಿಸಬೇಕು. ಒಳಗಡೆ ಹತ್ತು ದಿವಸಗಳಿಂದ ಮಾಡಿದ ತಿಂಡಿ ತುಂಬಿದೆ. ಒಲೆಯ ಮುಂದೆ ಬೆಳಗಿನಿಂದ ಸಂಜೆಯವರೆಗೂ ಒಂದೇ ಸಮನಾಗಿ ಕೂತು ಅಮ್ಮ ಹೊಸಹೊಸ ಭಕ್ಷ್ಯಗಳನ್ನು ಕರಿದು ಇಡುವ ವಾಸನೆ ಗಮಗಮನೆ ಮನೆಯಲ್ಲೆಲ್ಲಾ ಹರಡಿದೆ. ಇದರಿಂದ ಹುಡುಗರ ಹಸಿವೆಯ ಬೆಂಕಿಗೆ ಆಜ್ಯ ಹುಯ್ದಂತೆ ಆಗಿ ಅದರ ಕಾವು ಹೆಚ್ಚುತ್ತದೆ. ಆ ಕಾವಿಗೆ ಈ ಕಾಲ ಪರಿಮಾಣವು ನಿಡಿದಾಗಿ ನಿಡಿದಾಗಿ ಅದರ ತುದಿಯಲ್ಲಿರುವ ಕೃಷ್ಣ ಜನನ ಮುಹೂರ್ತವು ದೂರದೂರ ಸಾಗಿ ಕೊನೆಗೆ ಹುಡುಗರ ಆಸೆಯ ಕಣ್ಣಿಗೂ ಅದು ಮರೆಯಾಗಿ ಹೋಗುತ್ತದೆ. 'ಫಲವಸ್ತ್ರ' ಕಟ್ಟಿದ ಮೇಲೆ ಮಕ್ಕಳು ಅಕ್ಕಿ ಹಿಟ್ಟನ್ನು ಕಲಸಿ ಅದರ ಮೇಲೆ ಕೃಷ್ಣನ ಅಜ್ಜೊತ್ತಿ, ಮೋಂಬತ್ತಿಯನ್ನು ಕರಗಿಸಿ ಹುಯಿದು, ಐದಾರು. ಮೋಂಬತ್ತಿ ಕೃಷ್ಣರನ್ನು ಮಾಡಿ, ಗರಿತಿದ್ದಿ, ಸಿಂಗರಿಸಿ, ಹಸೆಯ ಮೇಲಿಟ್ಟರು. ಅಷ್ಟು ಹೊತ್ತಿಗೆ ಹಾಗೂ ಹೀಗೂ ಇರುಳಾಯಿತು. ಆದರೂ ತಂದೆಯವರು ಪೂಜೆಗೇಳಲೊಲ್ಲರು. ನಡುರಾತ್ರಿಗಿನ್ನೂ ಐದು ತಾಸುಗಳು ಉಳಿದಿವೆ! ಒಂಭತ್ತು ಘಂಟೆಯ ಹೊತ್ತಿಗೆ ಎಲ್ಲರಿಗಿಂತ ದೊಡ್ಡವನು ನಾನು ಒಬ್ಬ ಹೊರತು, ಎಲ್ಲರಿಗಿಂತ ಚಿಕ್ಕದಾದ ನನ್ನ ತಂಗಿಯ ಕೂಸೊಂದು ವಿನಾ, ಉಳಿದವರೆಲ್ಲರೂ ಎಲ್ಲೆಂದರಲ್ಲಿ ನಿದ್ದೆಯಲ್ಲಿ ಒರಗಿದರು.

ಹತ್ತೂವರೆ ಘಂಟೆಯಾಯಿತು. ಪೂಜೆಯ ಪೂರ್ವಭಾಗವನ್ನು ಮುಗಿಸಿಕೊಂಡು ತಂದೆಯವರು ಭಾಗವತ ಪುರಾಣದಲ್ಲಿ ಶ್ರೀಕೃಷ್ಣ ಜನನ ಪ್ರಕರಣವನ್ನು ಪಾರಾಯಣ ಮಾಡಲು ಅಂಗಳದಲ್ಲಿ ಮಣೆಯಮೇಲೆ ಕುಳಿತಿದಾರೆ.

ಮುಂದೆ ವ್ಯಾಸಪೀಠದಲ್ಲಿ ಭಾಗವತವು ತೆರೆದಿಟ್ಟಿದೆ. ಅದರ ಪಕ್ಕದಲ್ಲಿ ಅರ್ಘ್ಯಪಾತ್ರೆ, ಪೂಜಾದ್ರವ್ಯಗಳ ತಟ್ಟೆ, ಅಕ್ಷತೆಯ ಬಟ್ಟಲು ಇವು ಅಣಿಯಾಗಿವೆ. ಹಣತೆಯೊಂದರ ಬೆಳಕು ಇವುಗಳೆಲ್ಲವನ್ನೂ ಬೆಳಗಿ ಮುಂದುವರಿದು ಪ್ರಾಣಾಯಾಮವನ್ನು ಮಾಡುತ್ತಿರುವ ನಮ್ಮ ತಂದೆಯವರ ಮುಖದಮೇಲೆ ವಿರಮಿಸುತ್ತಿದೆ. ಜ್ಞಾನದಿಂದ ಓಜಸ್ವಿಯಾದ, ವ್ರತನೇಮಗಳಿಂದ ತೇಜಸ್ವಿಯಾದ, ಶಮದಮ ದಯಾದಿಗುಣಗಳಿಂದ ಪ್ರಸನ್ನವಾದ, ವಯಸ್ಸಿನ ಆಧಿಕ್ಯದಿಂದ ಗೌರವಾಧಿಷ್ಠಾನವಾದ, ಅಂದಿನ ಉಪವಾಸದಿಂದ ಶುಷ್ಕವಾದ ಮುಖವದು. ಈ ಕಡೆ ಕಂಬವೊರಗಿಕೊಂಡು ನಮ್ಮ ತಾಯಿಯವರೂ ಅವರ ಮಗ್ಗುಲಲ್ಲಿ ನನ್ನ ತಂಗಿಯೂ ಪುರಾಣಶ್ರವಣೋನ್ಮುಖರಾಗಿ ಕುಳಿತಿದ್ದಾರೆ. ವ್ಯಾಸಪೀಠದ ಮುಂದುಗಡೆ ದೀಪದ ಕಂಬದ ಹತ್ತಿರ ನನ್ನ ತಂಗಿಯ ಕೂಸು ಬಾಯಲ್ಲಿ ಬೆರಳಿಟ್ಟು ದೀಪಜ್ವಾಲೆಯಲ್ಲಿ ದೃಷ್ಟಿಯನ್ನು ನೆಟ್ಟು ಮಲಗಿದೆ. ಎಂತಹ ಸೋಜಿಗವಾದ ಚಿತ್ರವದು! ನನ್ನ ತಂದೆಯವರ ಧ್ಯಾನಸಕ್ತವಾದ, ಪುರಾತನ ಆರ್ಯಸಂಸ್ಕೃತಿಯ ಅಕಳಂಕಿತ ಪಕ್ವಫಲದಂತಿರುವ, ಮುಖದ ಮುಪ್ಪು—ಆ ಸಂಸ್ಕೃತಿಯ ಪಾತ್ರದಲ್ಲಿ ಹರಿದು, ಶ್ರದ್ಧೆಯ ನೆರೆಗೊಂಡು, ವೈದಿಕ ಧರ್ಮಕರ್ಮಗಳ ಕೂಲಗಳಿಂದ ನಿಯಮಿತವಾಗಿ, ಜ್ಞಾನಾರ್ಜನೆಯ ವೇಗದಿಂದ ನಿಷ್ಕಲ್ಮಷವಾಗಿ, ಹಾದಿ ಸಾಗುತ್ತಾ ಸಾಗುತ್ತಾ ಕ್ರಮೇಣ ತಿಳಿದು, ಅನಂತದಲ್ಲಿ ಆತ್ಮನಿವೇದನ ಮಾಡಲು ಅಣಿಯಾದ ಜೀವನದಿಯ ಚಿತ್ರವದು ! ಈ ಮಹಾನದಿಗೆ ಉಪನದಿಯಾಗಿ ತನ್ನ ಬಾಳನ್ನು ಬೆರಸಿರುವ ಪತಿಮನೋನುಕೂಲೆಯಾದ ತಾಯಿ; ಆ ಮೇಲೆ ಈ ವಾತಾವರಣದಲ್ಲೇ ಬೆಳೆದ ನನ್ನ ತಂಗಿ, ಮತ್ತು ಆ ಮಗು—"ಅಂಗಿ ಕೂಡ ಇಲ್ಲದೆ" ಬೆತ್ತಲೆಯಾಗಿ ಮಲಗಿರುವ ಕೂಸು, ಆ ಹಣತೆ, ಆ ಸನ್ನಿವೇಶ, ಆ ವೈದಿಕ ವಾತಾವರಣ. ಈ ಪ್ರಪಂಚ ಬೇರೆ—ಈ ವ್ಯಕ್ತಿಗಳೂ ಬೇರೆ; ನನಗೂ ಇವರಿಗೂ ಯಾವ ಸಂಬಂಧವೂ ಇರಲಾರದು ; ಇವರೆಲ್ಲರೂ ನನ್ನಿಂದ ದೂರ ದೂರ—ಬಹು ದೂರ—ಇನ್ನಾವುದೋ ಮಹಾ ಸಾಗರದ ಆಚೆ ತೀರದಲ್ಲಿ ಉಳಿದಂತೆಯೂ ಇವರ ನಾಡಿಗೆ ನಾನು ಯಾವುದೋ ಒಂದು ಆಕಸ್ಮಿಕ ಘಟನೆಯಿಂದ ಬಂದಂತೆಯೂ ನನಗೆ ಕಂಡುಬಂದಿತು. ಈ ಮನೆಯಲ್ಲಿ ನಾನು ಪರಕೀಯನಂತೆ ಭಾಸವಾಯಿತು. ತಲೆಯೆತ್ತಿ ಮೇಲೆ ನೋಡಿದೆ. ಗಡಿಯಾರವೊಂದು ಟಿಕ್ ಟಿಕ್ ಎಂದು ಹೊಡೆದುಕೊಳ್ಳುತ್ತಿತ್ತು. ನೋಡಿ ಸಂಟನನ್ನು ಕಂಡಷ್ಟು ಸಮಾಧಾನವಾಯಿತು. ಇಲ್ಲಿ ನಾನು ಮತ್ತು ಆ ಗಡಿಯಾರ ಇಬ್ಬರೇ ಸಹೃದಯ ವಿದೇಶೀಯರು !

ತಂದೆಯವರು ಪ್ರಾಣಾಯಾಮ ಮಾಡಿ, ಪೂಜೆ ಮುಗಿಸಿ, ಪುರಾಣವನ್ನು ಓದುವುದಕ್ಕೆ ಪ್ರಾರಂಭಿಸಿದಾರೆ. ಸಂಸ್ಕೃತ ಬಾರದಿದ್ದರೂ ಅನೇಕಾವೃತ್ತಿ ಕೇಳಿರೋಣದರಿಂದ ಅಮ್ಮನಿಗೂ ತಂಗಿಗೂ ಅರ್ಥಗ್ರಹಣ ಶಕ್ತಿಯುಂಟಾಗಿದೆ. ಹೃದಯವಿದ್ರಾವಕವಾದ ಸನ್ನಿವೇಶವದು. ಸೆರೆಮನೆಯಲ್ಲಿ ದೇವಕೀ ವಸುದೇವರುಗಳು ಬಂಧಿತರಾಗಿದಾರೆ. ಏಳು ಮಕ್ಕಳನ್ನು ಹೆತ್ತು ಕಂಸನಿಗೆ ಕೊಟ್ಟ ತಾಯಿಗೆ ಎಂಟನೆಯ ಗರ್ಭ ಪ್ರಾಪ್ತವಾಗಿ ಪ್ರಸವಕಾಲ ಒದಗಿದೆ. ಇದೂ ಕಂಸನಿಗೆ ಆಹುತಿಯಾಗಬೇಕೇನು ? ಬೆಂದ ಕರುಳಿನ ಮಾತೆಯ ಶೋಕದ ಝರಿಯನ್ನು ವಸುದೇವನ ಸಮಾಧಾನದ ಮಾತುಗಳು ತಡೆಯಲಾರವು. ಇವನ್ನು ಕೊಚ್ಚಿಕೊಂಡು ಹೋಗಿ ವಸುದೇವನನ್ನೂ ಈ ಶೋಕ ತಾಗುತ್ತದೆ. ಆತನೂ ಅಧೀರನಾಗುತ್ತಾನೆ. ಸೆರೆಮನೆಯಲ್ಲಿ ಕತ್ತಲು ಕವಿದಿದೆ. ಈ ದಂಪತಿಗಳ ಹೃದಯದಲ್ಲೂ ನಚ್ಚಳಿದು ಇರುಳು ಮೂಡಿದೆ.

ಪುರಾಣ ಓದುತ್ತಾ ಓದುತ್ತಾ ತಂದೆಯವರ ಸುಸಂಸ್ಕೃತ ಹೃದಯವು ಕೋಮಲವಾಗುತ್ತದೆ. ಮೃದುಭಾವಗಳು ಮನದಲ್ಲಿ ಸುಳಿಯುತ್ತವೆ. ನೆನಪುಗಳ ದಾಳಿಯಿಡುತ್ತವೆ. ಆ ಭಾವಗಳಿಗೂ ಈ ಕಥೆಗೂ ಸಂಬಂಧವುಂಟು. ದೇವಕೀದೇವಿ ವಸುದೇವರುಗಳ ಶೋಕವನ್ನು ತಮ್ಮ ಅನುಭವದಿಂದ ಅಳೆದು ಆತ್ಮೀಕರಿಸಿಕೊಳ್ಳುವ ಭಾವವದು. ಈ ಭಾವಕ್ಕೆ ಅವರು ಆಗಾಗ ಪುರಾಣ ಓದುವುದನ್ನು ನಿಲ್ಲಿಸಿ, ನುಡಿಗೊಡುತ್ತಿದ್ದಾರೆ. —"ಹಸುವಿಗೆ ಹುಲ್ಲು ಹಾಕಿದಿರಾ ?....ಪಾಪ ಮಕ್ಕಳು ಹಸಿದಿರಬೇಕು, ಸೊರಗಿ ನಿದ್ದೆ ಹೋಗುತ್ತಿದಾರೆ....ಈ ಬೆಕ್ಕಿಗೆ ಬೆಳಗಿನಿಂದಲೂ ಅನ್ನವಿಲ್ಲ. ಸ್ವಲ್ಪ ಹಾಲನ್ನಾದರೂ ಅದರ ಚಿಪ್ಪಿಗೆ ಬಿಡಬಾರದಾಗಿತ್ತೆ....ಈ ವರ್ಷ ಮಗು ಬಂದಿದಾನೆ, ಹೋದ ವರ್ಷ ಇನ್ನೆಲ್ಲೋ ಅಲೆಯುತಾ ಇದ್ದ, ಪಾಪ....ಅಯ್ಯೊ ಪಾಪ, ಆ ಮಗು ಆಸ್ಪತ್ರೆಯಲ್ಲಿ ಎಷ್ಟು ಕಷ್ಟಪಡುತ್ತಿದೆಯೋ ಕಾಣೆ, ಸೀತುವಿಗೂ ಸುಖವಿಲ್ಲ. (ಸೀತು ನನ್ನ ಅಕ್ಕ ; ಆ ಮಗು ಅವಳ ಹತ್ತು ವರ್ಷದ ಹುಡುಗ.)...." ಹೀಗೆ ಪುರಾಣ ಪಾರಾಯಣದ ಮಧ್ಯೆ ತಂದೆಯವರಾಡುವ ನುಡಿಗಳಿಗೆ ಯಾರೂ ಮರುನುಡಿ ಕೊಡುವುದಿಲ್ಲ. ನಮ್ಮ ಉತ್ತರವನ್ನು ಅವರು ಅಪೇಕ್ಷಿಸುವುದಿಲ್ಲವೆಂದೂ ನಮಗೆ ಗೊತ್ತು. ಈ ಮಾತುಗಳೆಲ್ಲವೂ ಅವರ ಭಾವೋದ್ರೇಕದ ಕಾಲುವೆಗಳು. ಹೀಗೆ ಪುರಾಣ ಮುಂದೆ ಸಾಗಿ ಕೃಷ್ಣ ಜನನ ಘಟ್ಟದ ಹತ್ತಿರಕ್ಕೆ ಬರುತ್ತದೆ. ಆಗ ನನ್ನ ತಂಗಿಯ ಕೂಸು ಮಗುಚಿಕೊಳ್ಳಲು ಪ್ರಯತ್ನಪಟ್ಟು, ಉತ್ಸಾಹದಿಂದ ಕೇಕೆಹಾಕಿ ನಗುತ್ತದೆ. ಆ ಕೇಕೆ ನಮ್ಮ ತಂದೆಯವರ ಕಿವಿಗೆ ಬೀಳುತ್ತದೆ. ಅವರು ದೃಷ್ಟಿಯನ್ನು

ಕನ್ನಡಕದಿಂದ ಮೇಲಕ್ಕೆತ್ತಿ, ಕೂಸನ್ನು ನೋಡುತ್ತಾರೆ. ಅವರ ಮುಖದಲ್ಲಿ ಹರುಷದ ನಗೆಯೊಂದು ಹರಡಿಕೊಳ್ಳುತ್ತದೆ. ದೂರದಿಂದಲೇ ಮಗುವಿನ ದೃಷ್ಟಿಯನ್ನು ತಮ್ಮ ಕಡೆಗೆ ಎಳೆದುಕೊಳ್ಳಲು ದನಿಗೈದು, ಅದು ಆ ಕಡೆ ತಿರುಗಲು, ಅದರೊಡನೆ ಮಾತಾಡಿ, ಅಪೂರ್ವವಾದ ಸುಖವೊಂದನ್ನು ಸವಿದು, "ಈ ಕೂಸೇನು ಸಾಮಾನ್ಯ ಮನುಷ್ಯರದು ; ಅಸಾಧಾರಣ ರೂಪವಿಲ್ಲ, ಗುಣಗಳಿಲ್ಲ. ಆದರೂ ಇದರ ಆಟಗಳಿಗೆ ಮನಸ್ಸೆಷ್ಟು ಮೋಹಗೊಳ್ಳುತ್ತದೆ; ಇನ್ನು ಆ ದೇವಶಿಶು ಎಷ್ಟು ಚೆನ್ನಾಗಿದ್ದಿರಬಹುದು! ಅದರ ಆಟಗಳಿನ್ನೆಷ್ಟು ಮುದ್ದಾಗಿರಬಹುದು. ನಂದಗೋಪ ಯಶೋದೆಯರೂ, ನಂದಗೋಕುಲದ ಪ್ರಜೆಗಳೂ, ಈ ಮುದ್ದನ ಸೋಗಿಗೆ ಹುಚ್ಚಾದುದರಲ್ಲಿ ಆಶ್ಚರ್ಯವೇನು" ಎನ್ನುತ್ತಾರೆ. ಈ ಮಾತು ಕೇಳಿ ನಮ್ಮ ದೃಷ್ಟಿ ಆ ಕೂಸಿನ ಕಡೆಗೆ ಹೊರಳುತ್ತದೆ. ಪುಟ್ಟ ಮುದ್ದು ಕೂಸು—ಹೌದು, ಅವರು ಹೇಳಿದ್ದು ನಿಶ್ಚಯ— ಆ ನಂದವ್ರಜದ ಶಿಶು ಇನ್ನೆಷ್ಟು ಮುದ್ದಾಗಿರಬಹುದು! ಈ ಹಸುಳೆ, ಈ ಮಾತು ಆ ಸನ್ನಿವೇಶಕ್ಕೆ ಒಂದು ಹೊಸ ಪ್ರಭೆಯನ್ನು ಬೀರುತ್ತವೆ. ಸೆರೆಮನೆಯಲ್ಲಿ ಕೃಷ್ಣನವತಾರವಾದುದರ ಭಾವ ನಮ್ಮೆಲ್ಲರಲ್ಲಿಯೂ ಮೊಳೆಯುತ್ತದೆ. ಅಷ್ಟು ಹೊತ್ತಿಗೆ ಪುರಾಣ ಮುಂದುವರಿದು ಕೃಷ್ಣ ಜನನವಾಗಿ, ತಂದೆಯವರು ಗಂಟೆಯನ್ನು ಬಾರಿಸಿ ಮಂಗಳಾರತಿ ಎತ್ತುತ್ತಾರೆ. ಹುಡುಗರೆಲ್ಲಾ ಗಾಬರಿಗೊಂಡು ಎಚ್ಚತ್ತು, ಅರ್ಘ್ಯ ಕೊಡುವ ಹೊತ್ತಿಗೆ ನಿದ್ದೆ ಪೂರ್ಣವಾಗಿ ತಿಳಿದು ಕೈಕಟ್ಟಿ ನಿಲ್ಲುತ್ತಾರೆ. ಆ ವೇಳೆಗೆ ರೋಹಿಣಿಯೊಡಗೂಡಿ ಚಂದ್ರ ಮೈದೋರುತ್ತಾನೆ. ಹೊರಗೆ ಹೋಗಿ ಆ ಕಿಶೋರಚಂದ್ರನಿಗೆ ಅರ್ಘ್ಯ ಸಮರ್ಪಿಸಿ, ಒಳಗಡೆ ಬಾಲಕೃಷ್ಣನಿಗೂ, ಬಲರಾಮನಿಗೂ ಅರ್ಘ್ಯ ಕೊಟ್ಟು ಭಕ್ಷ್ಯಗಳನ್ನು ನಿವೇದಿಸುತ್ತಾರೆ. ಅಲ್ಲಿಗೆ ಕೃಷ್ಣಜನನ ಘಟ್ಟ ಸಂಪೂರ್ಣವಾಗುತ್ತದೆ. ಹುಡುಗರ ಬಾಯ ಕುಕ್ಕೆ ಬಿಚ್ಚುತ್ತದೆ. ಅವರ ಆನಂದಲಹರಿ ಹರಿಯುತ್ತದೆ.

ಹೀಗೆ ಅಂದು ನಮ್ಮ ಮನೆಯಲ್ಲಿ ಕೃಷ್ಣಜನನವಾಯಿತು. ಪ್ರತಿವರ್ಷದಲ್ಲೂ, ಪ್ರತಿ ಗೃಹದಲ್ಲೂ, ಪ್ರತಿ ಕುಟುಂಬದಲ್ಲೂ, ಕೃಷ್ಣ ಶಿಶು ಹುಟ್ಟುತ್ತಲೇ ಇರುತ್ತಾನೆ, ಭಾರತ ಧರ್ಮವು ಭಾರತ ವರ್ಷದಲ್ಲಿ ಉಳಿದಿರುವವರೆಗೂ. ಆತನೊಂದಿಗೆ ದೊಡ್ಡ ನಚ್ಚೊಂದು ಹುಟ್ಟುತ್ತದೆ—ನೂತನ ಶ್ರದ್ಧೆಯೊಂದು, ಉತ್ಸಾಹವೊಂದು, ಸಂತೋಷವೊಂದು, ನೆಮ್ಮದಿಯೊಂದು ನೂತನಧೈರ್ಯವೊಂದು. ಈ ನಚ್ಚುಶ್ರದ್ಧಾವಂತನ ಬೆನ್ನುಹಿಡಿದು ಕೊನೆಯವರೆಗೂ ಬರುತ್ತದೆ. ಸಂಸಾರೋತ್ತರಣ ಕಾರ್ಯದಲ್ಲಿ ನೆರವಾಗುತ್ತದೆ. ಸರಿ

ಮನೆಗೆ ಬೆಳಕಾಗುತ್ತದೆ. ಬೆಳಕಿರುವ ಮನೆಗೆ ನೂತನ ಪ್ರಭೆ ಕೊಡುತ್ತದೆ. ಈ ನಚ್ಚು, ನನ್ನ ಪಿತ್ರಾರ್ಜಿತವಾದ, ಯಾರಿಂದಲೂ ಕದಿಯಲಾಗದ, ಎಂದೂ ನಶಿಸದ, ಸಂಸಾರಕ್ಕೆ ಸಾರಭೂತವಾದ ಆಸ್ತಿ—ಈ ಶ್ರೀಕೃಷ್ಣ ಜನನದ ನಚ್ಚು.

# ಕೊಳದ ತಡಿಯಲ್ಲಿ

ಶರತ್ಕಾಲದ ನಡುವಗಲು ಶಾಂತವೂ, ಪ್ರಕಾಶಮಾನವೂ ಸುಖೋಷ್ಣವೂ ಆಗಿತ್ತು. ನನ್ನ ಮೆಚ್ಚಿನ ತಿಳಿನೀರಿನ ಕೊಳವು ಈ ನಡುವಗಲ ಬೆಳಕಿನಲ್ಲಿ ಬಹಳ ಅಂದವಾಗಿ ಕಾಣಬಹುದೆಂದುಕೊಂಡೆ. ಅದನ್ನು ನೋಡಬೇಕೆಂಬ ಹಂಬಲ ಹುಟ್ಟಿತು. ಅಂದು ಮನಸ್ಸು ಯಾವ ಕಾರಣದಿಂದಲೋ ಏನೋ ಉದ್ವಿಗ್ನವಾಗಿತ್ತು. ನಿರ್ದೇಶಿಸಲರಿಯದ ಯಾವುದೋ ಒಂದು ಬಯಕೆಗೆ ಉತ್ಸುಕವಾಗಿರುವಂತೆ ತೋರಿತು.

ಮನಸ್ಸು ಈ ಪರಿಸ್ಥಿತಿಯಲ್ಲಿರುವಾಗ ಕೆಳದಿಯಂತಿದ್ದ ಆ ತಿಳಿಗೊಳವನ್ನು ನೋಡಬೇಕೆಂಬ ಬಯಕೆ ನನಗೆ ಸಹಜವಾಗಿ ಹುಟ್ಟಿತು. ಆ ಕೊಳವು ನನಗೊಂದು ಅಚೇತನ ವಸ್ತುವಾಗಿರಲಿಲ್ಲ. ನನ್ನ ಬಾಳಿನೊಡನೆ ಅದೊಂದು ಜೀವಂತ ವ್ಯಕ್ತಿಯಂತೆ ಬೆರೆದಿತ್ತು. ಅದರ ಸೋಪಾನ ಪಂಕ್ತಿಗಳು ನನ್ನ ಕಂಬನಿಯನ್ನು ಆತು ಹೀರಿದ್ದವು. ಅದರ ಕಿರುದೆರೆಗಳು ನನ್ನ ನಗೆಗೆ ಹೊಳಲುಗೊಟ್ಟಿದ್ದವು. ತೀರದ ಸಂಪಗೆಮರವೂ ಹೂಗಿಡಗಳೂ ನನ್ನ ವಿನೋದಕ್ಕೆ ಕೌತುಕಗೊಂಡು ಪಿಸುಗುಟ್ಟಿ ನಕ್ಕಿದ್ದುವು. ಈ ತೆರದಲ್ಲಿ ನನ್ನ ಬಾಳಿಗೂ ಆ ಕೊಳಕ್ಕೂ ಅತಿ ಸಮೀಪವಾದ ಸುಂದರ ಸಂಬಂಧವೊಂದನ್ನು ನಾನು ಕಲ್ಪಿಸಿಕೊಂಡಿದ್ದೆ. ಅದರ ವಾತಾವರಣದಲ್ಲಿ ನನ್ನ ದುಗುಡವನ್ನು ನೀಗಿಕೊಳ್ಳುವುದು ನನಗೆ ಬಳಕೆಯಾಗಿಬಿಟ್ಟಿತ್ತು.

ಕೊಳವನ್ನು ತಲುಪಿ, ದಕ್ಷಿಣ ಸೋಪಾನದ ಒಂದು ಮೆಟ್ಟಿಲಿನ ಮೇಲೆ ಕುಳಿತೆ. ದಡದಲ್ಲಿದ್ದ ಸಂಪಗೆ ಮರವು, ಹೂ ಗಾಳಿಯಲ್ಲಿ ಚಂಚಲವಾಗಿದ್ದ ತನ್ನೆಲೆಗಳ ನೆರಳುಗಳನ್ನು ನನ್ನ ತಲೆಗೆ ಮುಡಿಸಿ ಪ್ರದಶವಿ ಸ್ನೇಹವನ್ನು ಸೂಚಿಸುತ್ತಿತ್ತು. ನೂರಾರು ಸೂರ್ಯಬಿಂಬಗಳು ಜಲದ ಕಿರುದೆರೆಗಳನ್ನೇ ಸಾಲು ಸಾಲಾಗಿ ಸೈನಿಕರಂತೆ ಕವಾಯಿತು ಮಾಡುತ್ತಿದ್ದವು. ಈ ರವಿದಳದ ಲೀಲಾ ರಣಗತಿಯಿಂದ ಕೊಳವು ಜ್ಯೋತಿರ್ಮಯಿಯಾಗಿ, ಚೈತನ್ಯವತಿಯಾಗಿ ಕಂಗೊಳಿಸುತ್ತಿತ್ತು. ಆ ವನಪ್ರದೇಶವು ನಿರ್ಜನವಾಗಿತ್ತು. ವೈದಿಕರೊಬ್ಬರು ಮಾಧ್ಯಾಹ್ನಿಕವನ್ನು ಪೂರೈಸಿಕೊಂಡು ಆಗತಾನೆ ಹೊರಟು ಹೋಗಿದ್ದರು. ಸೃಷ್ಟಿಯು ನೀರವವಾಗಿ ಮಧ್ಯಾಹ್ನದ ಬಿಡುವನ್ನು ಅನುಭವಿಸುತ್ತಿರುವಂತೆ ತೋರಿತು. ಆ ನೆಮ್ಮದಿಯು ನನ್ನಾತ್ಮವನ್ನು ಮೆಲ್ಲಮೆಲ್ಲನೆ ಸೋಕಿತು. ಒಂಟಿತನದ ಔತ್ಸುಕ್ಯವು ಸಡಲಿ ಪ್ರೇಮದಲ್ಲಿ ನೆಚ್ಚುದಿಸಿತು.

ನನ್ನ ಬಾಳಿನ ಡೊಂಕುಗಳನ್ನು ಅರಿತು, ತನ್ನ ಬಾಳನ್ನು ಅದಕ್ಕೆ ಹೊಂದಿಸಿ ಕೊಂಡು ಬೆರೆದಿರುವ ಸಹೃದಯಳಾದ ಪ್ರೇಮಪರಿಪೂರ್ಣಳಾದ ಕೆಳದಿ ಯೊಬ್ಬಳ ಸಾನ್ನಿಧ್ಯದಲ್ಲಿರುವಂತೆ ನನಗೆ ಅನುಭವವಾಯಿತು.

ನನ್ನ ಮನಸ್ಸು ಹೀಗೆ ಪ್ರೇಮಸಾನ್ನಿಧ್ಯದ ನೆಮ್ಮದಿಯನ್ನು ಅನುಭವಿಸು ತ್ತಿರುವಾಗ ಮೃದುಮಂಜುಳವಾದ ದಿವ್ಯವಾಣಿಯೊಂದು "ಮಗು" ಎಂದು ಸಂಬೋಧಿಸಿದುದು ನನ್ನನ್ನು ಅಷ್ಟು ಚಕಿತಸನ್ನಾಗಿ ಮಾಡಲಿಲ್ಲ. ಆ ಸನ್ನಿ ವೇಶಕ್ಕೂ ನನ್ನ ಅಂದಿನ ಮನೋಭಾವಕ್ಕೂ ಈ ಸಂಬೋಧನೆಯು ಸ್ವಾಭಾ ವಿಕವಾಗಿರುವಂತೆ ತೋರಿತು. ಸಹಜವಾದ ಕುತೂಹಲದಿಂದ ಆ ವಾಣಿ ಬಂದೆಡೆಗೆ ತಿರುಗಿದೆ. ನನ್ನ ಬೆನ್ನ ಹಿಂದೆ ನೆಲವನ್ನು ಮುಟ್ಟಿಯೂ ಮುಟ್ಟದ ಹಾಗೆ ನಿಂತಿದ್ದ ದೇವ ಕಿಶೋರಿಯೊಬ್ಬಳನ್ನು ಕಂಡೆ—ಕಂಡು ಆಶ್ಚರ್ಯ ಮುಗ್ಧನಾದೆ.

ನನಗೆ ವ್ಯಕ್ತವಾಗಿ ಕಂಡುದು ಅವಳ ಮುಖ ಮಾತ್ರ. ಇತರ ಅಂಗ ಗಳೆಲ್ಲವೂ ಅವಳ ನಿಬಿಡಕೃಷ್ಣ ಕೇಶರಾಶಿಯಲ್ಲಿ ಮುಳುಗಿಹೋಗಿದ್ದವು. ಅಷ್ಟು ಹೇರಳವಾದ ಕೂದಲನ್ನು ನಾನು ಹಿಂದೆ ಎಂದೂ ಕಂಡವನಲ್ಲ. ಹ್ಞಾ, ಹಾಗೆ ಹೇಳಲಾರೆ. ಹಿಂದೆ ಎಂದೋ ಬಾಳಿನ ಮಬ್ಬಿನಲ್ಲಿ ಇಂಥ ಕೇಶರಾಶಿಯೊಂದು ನನ್ನ ಭುಜವನ್ನು ಸೋಕಿದ್ದ ಜ್ಞಾಪಕ. ಕುತೂಹಲ ದಿಂದ ಮುಖವನ್ನು ದೃಷ್ಟಿಸಿ ನೋಡಿದೆ. ಏನು ಅದ್ಭುತ ಸೌಂದರ್ಯವದು! ಈ ರೂಪು ನನಗೆ ಚಿರಪರಿಚಿತವಾದಂತೆ ತೋರಿತು. ಬಾಳನ್ನು ಕಳವಳಗೊ ಳಿಸಿ, ಅರಕೆಗಳನ್ನು ಎತ್ತಿ ತೋರಿಸಿ, ಹಾಗೂ, ಮೋದಗಳ ಅಣೆಕಟ್ಟೊಡೆದು, ಅಮೃತದ ಮಳೆಗರೆದು, ಭಾವಗಳಿಂದ ಹೃದಯವನ್ನು ಉಲ್ಲೋಲಕಲ್ಲೋಲ ಮಾಡಿದ, ನಾನು ಹಿಂದೆ ಎಂದೋ ಕೇಳಿದ ಗಾನದ ಸ್ಮೃತಿಯಂತೆ ಈ ಕಿಶೋರಿಯ ರೂಪು ನನ್ನ ಹೃದಯವನ್ನು ವಿಚಿತ್ರ ರೀತಿಯಲ್ಲಿ ಕಲಕಿ ಬಿರು ಗಾಳಿ ಮಿಂಚುಗಳನ್ನು ಸುಳಿಸಿತು. ಈ ಸಂಪಗೆ ಎಳಸಿನ ಮೂಗು, ಪ್ರಣ ಯದ ಹುಚ್ಚು ಪ್ರವಾಹಕ್ಕೆ ಅಣೆಕಟ್ಟಿದಂತಿರುವ ಪುಟ್ಟಬಾಯಿ, ಅದರ ಕಿಂಡಿ ಯಂತಿರುವ ತುಟಿಗಳು, ಸ್ನೇಹಪೂರ್ಣವಾದ ತುಂಟುನಗೆಬೆಳಕಿನ ಕಣ್ಣು ಗಳು, ಈ ಭ್ರೂಭಂಗಿ, ಈ ಕೇಶರಾಶಿ! ಹಾಗಾದರೆ ಇವಳಾರು?

ಇವಳಾರು? ನಾನು ಭ್ರಾಂತನಾಗಿರಬೇಕೆಂದುಕೊಂಡು ಕಣ್ಣುಗಳನ್ನುಜ್ಜಿ ಕೊಂಡೆ. ತಿರುಗಿ ಆ ಕಡೆ ನೋಡುವಲ್ಲಿ ಆ ದೇವಿ ಅಲ್ಲೆ ನಿಂತಿದ್ದಳು. ಈಗ ಹುಸಿನಗೆಯೊಂದು ಆ ತುಟಿಗಳಲ್ಲಿ ಮಿನುಗುತ್ತಿತ್ತು.

ಅವಳು ಹೀಗೆಂದಳು—ನೀನಿಂದು ಉದ್ವಿಗ್ನನಾಗಿರುವೆ. ನಿಜ! ನಿನಗೆ

ಸಹಾನುಭೂತಿ ಬೇಕು. ನಾನು ನಿನ್ನ ಕೆಳದಿ. ನಿನ್ನ ಅಂತರಂಗವನ್ನು ಬಲ್ಲೆ. ಒಲುಮೆಯೆಂಬುದೇನೆಂಬುದನ್ನು ಅರಿತಿರುವೆಯಾ ? ನಿನ್ನ ಅವ್ಯಕ್ತವಾದ ನಿರ್ವೇದನೆಯನ್ನು ನಾನು ನಿನಗೆ ಸ್ಪಷ್ಟಗೊಳಿಸಬೇಕೆಂದೇ ಇಂದು ಬಂದೆ. ಒಲುಮೆಯೆಂದರೇನು ಬಲ್ಲೆಯಾ ? ಈ ಪ್ರಶ್ನೆಗೆ ನಾನು ನಿರುತ್ತರನಾದೆ. ಅಪ್ರತಿಭನಾದೆ. ವರ್ತಮಾನದ ಅರಿವಳಿದು ಬಾಳು ಎಲ್ಲಿಗೋ ತೇಲಿಹೋಗು ವಂತಾಯಿತು. ದೃಷ್ಟಿಶೂನ್ಯವಾದ ಕಣ್ಣುಗಳನ್ನು ಅವಳ ಮುಖದ ಮೇಲೆ ನನಗೆ ತಿಳಿಯದಂತೆಯೇ ನೆಟ್ಟೆ. ಸ್ವಲ್ಪ ಹೊತ್ತಿನ ಮೇಲೆ ಅರಿವು ಮರಳಿತು. ನೆನಪು ಕುಮುರಿತು. ಬಿಗಿದ ಕೊರಲಿನಲ್ಲಿ "ಹಾಗಾದರೆ, ನೀನು ಅವಳೆ ?" ಎಂದು ತೊದಲಿದೆ.

"ಅವಳೆಂದರೆ ?"

"ಹಿಂದೆ, ಬಹಳ ಹಿಂದೆ, ಒಂದು ಯುಗವಾಗಿರಬಹುದು—ಆಕೆ—ಅವಳಲ್ಲವೆ ನೀನು ?"

"ಅವಳು, ಆಕೆ, ಯುಗ —ಏನಿದು ನಿನ್ನ ಪ್ರಲಾಪ ? ನೀನು ಭ್ರಾಂತ, ಹುಚ್ಚ. ಅವಳಾರು, ನೀನಾರು ? ಅವಳಿಗೆ ನಿನ್ನಲ್ಲೇನು ಕೆಲಸ ? ಇಲ್ಲಿಗೇಕೆ ಬಂದಾಳು ?"

"ಹೌದು, ಇಲ್ಲೇನು ಕೆಲಸ, ಇಲ್ಲಿಗೇಕೆ ಬಂದಾಳು" ಎಂದು ನನ್ನೆದೆ ಹೊಳಲುಗೊಟ್ಟಿತು. ನಾನು ನಿರುತ್ತರನಾಗಿ, ಕರಣಶೂನ್ಯನಾಗಿ, ಅರಿವುಗೆಟ್ಟು, ಕಣ್ಣುಗಳನ್ನು ತಗ್ಗಿಸಿ ಸುಮ್ಮನೆ ಕುಳಿತುಬಿಟ್ಟೆ. ಹೀಗೆ ಎಷ್ಟು ಹೊತ್ತು ಕುಳಿತಿದ್ದೆನೋ ನನಗೆ ತಿಳಿಯದು. ಅರಿವು ಮರಳಿದಾಗ ದಿವ್ಯಗಾನವೊಂದು ಕಿವಿಗೆ ಸುಳಿಯಿತು. ಚಕಿತನಾಗಿ ಹಿಂದೆ ತಿರುಗಿ ನೋಡಿದೆ, ಆ ವನಕಿಶೋರಿಯು ಅಪೂರ್ವ ರಾಗವೊಂದನ್ನೆತ್ತಿ ಅಕಾರಾದಿ ಆಲಾಪನೆಗೆ ತೊಡಗಿದ್ದಳು. ಆ ರಾಗವು ವಿಪ್ರಲಂಭರಸಾತ್ಮಕವಾದುದು. ಕರುಣೆಯ ಮಾತೃಕೆಯೂ ಹೌದು. ಆಹಾ ! ಆ ಗಾನದ ಸವಿಯನ್ನು ಏನು ಹೇಳಲಿ? ಆ ರೂಪ, ಆ ಗಾನದ ರೀತಿ, ಆ ರಾಗ, ಆ ದಿವ್ಯತೆ, ಆ ನವ್ಯತೆ. ಆ ರಸ ಪರಿಪೋಷಣ ಚಾತುರ್ಯ—ಏನು ಹೇಳಲಿ—ನಾನು ಮುಗ್ಧನಾದೆ. ಭಾವಾವಿಷ್ಟನಾದೆ. ರಾಗವನ್ನು ಮಂದ್ರ ಮಧ್ಯಮ ತಾರಕಗಳಲ್ಲಿ ಹಾಡಿ, ಅಪ್ಸರೆಯು ಅದೇ ರಾಗದಲ್ಲಿ ಒಂದು ಸಣ್ಣ ಗೀತಿಕೆಯನ್ನು ಗಾನಮಾಡಲು ಪ್ರಾರಂಭಿಸಿದಳು :

ತರುಣ ಬಾಳ ಮಿಾಸಲಿಟ್ಟು
ಒಲಿದನಬಲೆಯೊರ್ವಳಂ

ಒಲಿದುದ ತಾನರಿಯನವಂ
ಇರೆ ಬಿಂಕದ ಕಾವಳಂ

ಮರ್ಮಸ್ಪರ್ಶಿಯಾದ ಮಾತುಗಳವು. ಅದೊಂದು ಹಳೆಯ ಕತೆ. ತರುಣನೊಬ್ಬನು ತನಗೆ ತಿಳಿಯದಂತೆ ಬಾಳಿನಾಳದಿಂದ ಒಬ್ಬಳನ್ನು ಪ್ರೀತಿಸುವುದು. ಆ ಮೇಲೆ ಆ ಪ್ರೇಮವನ್ನು ತನ್ನ ನಿರಾಶೆಯಿಂದ ಅಳಿಯಲೆತ್ನಿಸುಸುವುದು.

ಒಲಿದುದ ತಾನರಿಯನವಂ
ಇರೆ ಬಿಂಕದ ಕಾವಳಂ

ಈ ಚರಣವನ್ನು ಪಲ್ಲವಿಯ ಹಾಗೆ ಎತ್ತಿಕೊಂಡು ವಿಚಿತ್ರ ತಾಳಗತಿಗಳಲ್ಲೂ ಮಧುರರಾಗ ಭಾವಗಳಲ್ಲೂ ಅಪ್ಸರೆಯು ಹಾಡಿದಳು. ಈ ಮಾತುಗಳಲ್ಲಿ ನಿರೂಪಿತವಾಗಿರುವ ನಿರಾಶೆಯನ್ನು ಅವಳ ಗಾನವು ಎಷ್ಟು ದೈನ್ಯದಿಂದ ಹೇಳುತ್ತಿತ್ತು.

ಇಂತೊಲಿದುದ ತಾನರಿಯನವಂ
ಇರೆ ಬಿಂಕದ ಕಾವಳಂ

ಇದನ್ನೂ ಹೀಗೆಯೇ ಲಂಬಿಸಿ, ಹಾಡುತ್ತಿದ್ದರೆ ನನ್ನ ಹೃದಯ ವಿದೀರ್ಣವಾಗುತ್ತದೆ ಎಂದುಕೊಂಡೆ. ಆದರೆ ನಿಲ್ಲಿಸೆಂದು ಬೇಡಿಕೊಳ್ಳಲು ಮನಸ್ಸು ಬರಲಿಲ್ಲ. ಮರ್ಮಸ್ಪರ್ಶಿಯಾದರೂ ಕಡುಸವಿಯಾದ ಗಾನವದು!

ಕೊನೆಗೆ ಪಲ್ಲವಿಯನ್ನು ಮುಗಿಸಿ ಎರಡನೆಯ ಚರಣವನ್ನು ಹಾಡುವುದಕ್ಕೆ ಆ ಅಪ್ಸರೆ ತೊಡಗಿದಳು.

ಒಂದು ದಿನದೊಳಾತ ತನ್ನ
ಎದೆಯ ಪಿರಿದು ನೋಡುವಂ
ಏನ ಕಾಂಬನಲ್ಲಿ? ಅಮಮ!
ಬರಿಯ ಬರಿಯ ಶೂನ್ಯವಂ—

ಕೇಳಿದೆ. ಪ್ರೇರಣೆ ಇಲ್ಲದೆ ನನ್ನೆದೆಯ ಕಡೆ ನನ್ನ ದೃಷ್ಟಿ ಹೊರಳಿತು. ಅಲ್ಲಿ ನಾನು ಕಂಡುದೇನು? ಅಬ್ಬ! ಅಗಾಧವಾದ, ಸೀಮಾತೀತವಾದ ಶೂನ್ಯ! ಈ ಶೂನ್ಯದಲ್ಲಿ ಹುಚ್ಚಾಸೆಗಳೂ ಅಸಾಧ್ಯ ಸುಖಗಳೂ, ಬಯಲು ಬಯಕೆಗಳೂ ಭ್ರಮಿಸುತ್ತಿದ್ದವು. ನೋಡಲಾರದ ಕಣ್ಣು ಮುಚ್ಚಿಕೊಂಡೆ. ತಿರುಗಿ ಕಣ್ಣುಬಿಡುವ ಹೊತ್ತಿಗೆ ಹಾಡು ಮುಗಿದಿತ್ತು. ಅಪ್ಸರಕನ್ಯೆಯು ಮಾಯವಾಗಿ

ದ್ದಳು. ನಾನು ಸ್ತಬ್ಧನಾಗಿ ಪುಷ್ಕರಿಣಿಯ ತೀರದಲ್ಲೇ ಕುಳಿತುಬಿಟ್ಟೆ—ಪಡುವಣ ಸೋಪಾನದ ನೆರಳು ನಿಡಿದಾಗಿ ನೀರನ್ನು ಸೋಕುವವರೆಗೂ; ಮಾರ್ಮಿಕವಾದ ಆ ಗೀತದ ಹೊಳಲು ನನ್ನ ಸ್ಮೃತಿಯಲ್ಲಿ ನಶಿಸಿ ಹೋಗುವವರೆಗೂ.

# ನೌಕಾಚಂದ್ರ

ಅಂದು ಕೃಷ್ಣದ್ವಾದಶಿ. ಇರುಳು ದಟ್ಟವಾಗಿ ಹಬ್ಬಿತ್ತು. ಆಗ ತಾನೆ ನಾನು ಮನೋಹರವಾದ ಒಂದು ಉತ್ಸವವನ್ನು ನೋಡಿಕೊಂಡು ಬಂದು ನನ್ನ ಕಿರುಮನೆಯಲ್ಲಿ ಹಾಸಿಗೆಯಮೇಲೆ ಮಲಗಿಕೊಂಡು ಅಂದೆ ತಲಪಿದ ನನ್ನ ಹೆಂಡತಿಯ ಕಾಗದವೊಂದನ್ನು ಮೂರನೆಯ ಸಾರಿ ಓದುತ್ತಾ, ಆದರ ಲ್ಲಿದ್ದ ಒಲುಮೆಯ ಸಂದೇಶ, ಚಿರಕಾಲ ಅಗಲಿರುವದರ ಯಾತನೆ, ಸಂದರ್ಶನೋತ್ಸುಕತೆ, ಒಂದು ಜೀವವು ಇನ್ನೊಂದನ್ನು ಅರಸಿಕೊಂಡು ಹರಿದು ಬಂದು ಬೆರೆಯುವ ರೀತಿ, ಇವುಗಳನ್ನು ಕುರಿತು ಮನದಲ್ಲೆ ಮೆಲಕು ಹಾಕುತ್ತಿದ್ದೆ. ಪ್ರಣಯವೊಂದು ಅಮೋಘವಾದ ಜೀವಶಕ್ತಿ, ಹಾಗೂ ಗಂಭೀರವಾದ ಮಾಯೆಯೆಂದೆನಿಸಿತು. ಅದು ಎಷ್ಟು ವಿವಿಧ ವಿಚಿತ್ರ ರೀತಿಗಳಲ್ಲಿ ಆವಿಷ್ಕರಿಸುತ್ತದೆ! ಅದರ ಪ್ರವಾಹವು ಎಷ್ಟು ಚಿತ್ರಗತಿಯಲ್ಲಿ ಹರಿಯುತ್ತದೆ! ವಿಶ್ವವೆಲ್ಲಾ ಈ ಹೊನಲಿನ ಪಾತ್ರದಂತೆ ತೋರಿತು. ನೀರಿನಲ್ಲಿ ಮೀನುಗಳಂತೆ—ಹಂಸಗಳಂತೆ—ಈ ಹೊನಲಿನಲ್ಲಿ ಚರಾಚರ ಜೀವಿಗಳೆಲ್ಲವೂ ಈಜಿ ತೇಲಿ ಮುಳುಗಿ ಕ್ರೀಡಿಸುತ್ತಿರುವಂತೆ ಭಾಸವಾಯಿತು. ಈ ಪ್ರವಾಹದ ಮೇಲೆ ಮಾನವರ ಅಸಂಖ್ಯಾತವಾದ ಅತಿಲಘು ನೌಕೆಗಳು ತೇಲುತ್ತಿರುವುದು ಕಣ್ಣಿಗೆ ಬಿತ್ತು. ಇವುಗಳಲ್ಲ ಕೆಲವು ಅಲೆಗಳ ಹೊಡೆತಕ್ಕೆ ಮಗುಚಿಕೊಳ್ಳುವುವು. ಕೆಲವು ಚಂಡಮಾರುತನಿಗೆ ಸಿಕ್ಕಿ ಬಂಡೆಗಳ ಮೇಲೆ ಒಡೆಯುವುವು. ಇನ್ನೂ ಕೆಲವು ಸುಳಿಗಳೊಳಗೆ ಗಿರ್ರನೆ ತಿರುಗಿ ಮುಳುಗಿಹೋಗುವುವು. ಆದರೆ ಈ ವ್ಯಾಘಾತಗಳಿಂದ ತಪ್ಪಿಸಿಕೊಂಡು ತೇಲುವ ಕ್ರೀಡಾ ನೌಕೆಗಳು ಅಲ್ಪವಾಗಿಲ್ಲ; ಅಸಂಖ್ಯಾತವಾಗಿವೆ. ಈ ದೋಣಿಗಳು ಅಲೆಗಳ ಮೇಲೆ ಕೆಳಗೆ ಧುಮುಕಿ, ಕುಣಿದು, ನಲಿದು, ಪಾರಿವಾಳಗಳಂತೆ—ಅಲ್ಲ, ಉಚ್ಚೈಶ್ರವಸ್ಸುಗಳಂತೆ....ಎಷ್ಟು ಸೋಜಿಗವಾಗಿ ಸಾಗುತ್ತಿವೆ! ಅವುಗಳಲ್ಲಿ ಕುಳಿತಿರುವವರ ವಿನೋದಾನಂದಗಳನ್ನು ಏನು ಹೇಳಲಿ? ವಿಶ್ವವು ಇವರ ನಗೆಯಿಂದ ತುಂಬಿ ತುಳುಕುವಂತೆ ತೋರುತ್ತದೆ. ಭಗ್ನ ನೌಕೆಗಳಲ್ಲಿ ಮುಳುಗಿಹೋಗುತ್ತಿರುವವರ ಆರ್ತನಾದವು ಈ ನಗೆಯ ಸೆರಗನ್ನೂ ಸೋಕುವುದಿಲ್ಲವೇನೋ! ಈ ಆನಂದದ ಗಾನದ ಏಕದೇಶದಲ್ಲಿ ಅದು ಮುಳುಗಿ ಹೋಗುವದೇನೋ! ಹೀಗೆ ಭಾವಿಸಿಕೊಳ್ಳುತ್ತಿರುವಾಗ ಹೊರಗಡೆ ಎದುರು ಕಿಟಕಿಯ ಮೂಲಕ ಉಜ್ಜ್ವಲವಾಗಿ ಮಿನುಗುತ್ತಿರುವ ಮಿಥುನರಾಶಿಯು

ಕಣ್ಣಿಗೆ ಬಿತ್ತು, ನೀವೂ ಈ ಪ್ರಣಯ ವ್ಯಾಪ್ತಿಯಿಂದ ತಪ್ಪಿಸಿಕೊಂಡಿಲ್ಲ ಎಂದು ಮನದಲ್ಲಿ ನಕ್ಕೆ.

ಈ ರೀತಿಯಾಗಿ ಪ್ರಣಯವನ್ನು ಒಂದು ನೆರೆಯನ್ನಾಗಿ ಭಾವಿಸಿ, ಸೃಷ್ಟಿಯನ್ನು ಅದರಲ್ಲಿ ತೇಲಿಬಿಟ್ಟಿರುವ ನನ್ನ ಕಲ್ಪನೆಯು ನನಗೆ ಒಂದು ವಿಧವಾದ ಸಂತೋಷವನ್ನುಂಟುಮಾಡಿತು. ಈ ಹರ್ಷವು ಮನಸ್ಸಿಗೆ ಒಂದು ತೆರದ ನೆಮ್ಮದಿಯನ್ನು ತಂದಿತು—ಈ ನೆಮ್ಮದಿ ನಿದ್ರೆಯನ್ನು-ನಿದ್ರೆಯೊಂದು ಕನಸನ್ನು.

ಅದೊಂದು ವಿಚಿತ್ರವಾದ ಕನಸು. ನನ್ನ ಜಾಗೃತ ಭಾವನೆಗಳೆಲ್ಲಾ ಕನಸಿಗಿಳಿದು ರೂಪುಗೊಂಡಿದ್ದುವು.

ಚಂದ್ರನು ಮುತ್ತಿಡುತ್ತಿರುವ ಇರುಳು. ಎರಡು ದಡಗಳನ್ನೂ ಮೀರಿ ಹರಿಯುತ್ತಿರುವ ನೆರೆಗೊಂಡ ವಿಶಾಲ ನದಿ. ಈ ನದಿಯಲ್ಲಿ ಅದೇ ಅತಿ ಹಗುರವಾದ ಪ್ರಣಯ ನೌಕೆಗಳ ಯಾತ್ರೆ. ಅಲೆಗಳ ಹೊಡೆತ ಮೊರೆತಗಳನ್ನು ಅಲಕ್ಷಿಸಿ, ನೆರೆಯ ಸೆಳೆಯನ್ನೂ ದರ್ಪವನ್ನೂ ಹೀಯಾಳಿಸುವಂತೆ, ಮದಗಜವನ್ನೇರಿ ಅದನ್ನು ಕೆಣಕಿ ಕೆರಳಿಸಿ ಅದರ ಕೋಪಾಟೋಪಕ್ಕೆ ವಿನೋದಗೊಳ್ಳುವ ಚತುರ ಮಾವತಿಗನಂತೆ, ತೆರೆಗಳ ಮೇಲೇರಿ, ಹಾರಿ, ಧುಮುಕಿ, ದೆಸೆದೆಸೆಗೆ ವಿಚಿತ್ರಗತಿಯಿಂದ ಧಾವಿಸುವ ದೋಣಿಗಳು. ಆ ಪ್ರವಾಹದ ಗಂಭೀರನಾದವನ್ನೇ ಶ್ರುತಿಗೊಂಡು, ಆ ವಾತಾವರಣವನ್ನು ತುಂಬುವಂತೆ ಈ ದೋಣಿಗಳಿಂದೇಳುವ, ಹೃದಯಸ್ಪರ್ಶಿಯಾದ ಪ್ರಮೋದಾನಂದ ಗಾನ! ಈ ಗಾನದಂಚಿನಲ್ಲಿ, ಅಶುದ್ಧಸ್ವರದಂತೆ, ರಾಗದ ಸೊಗಸನ್ನು ಹೆಚ್ಚಿಸುವ ಮಿಶ್ರಸ್ವರದಂತೆ, ಒಡೆದ ದೋಣಿಗಳಿಂದೆದ್ದು ಒಮ್ಮೊಮ್ಮೆ ಕೇಳಿಸುವ ಆಕ್ರಂದನ. ಒಂದು ಗಳಿಗೆಯ ಮೇಲೆ ಇವುಗಳೆಲ್ಲಾ ತೆರೆಯಲ್ಲಿ ಮರೆಯಾಗಿ ಮತ್ತೊಂದು ಕನಸು ರೂಪುಗೊಳ್ಳುವುದು.

ಈಗೊಂದು ಪಟ್ಟಣ. ಅಲ್ಲಿ ತನುಮನಗಳನ್ನು—ಯಾಕೆ ಜೀವಿತ ಸರ್ವಸ್ವವನ್ನೂ ಅಭಿಲಾಷೆಗೆ ಒತ್ತೆಯಿಟ್ಟು, ಸಂಕೇತವನ್ನು ಅರಸಿಕೊಂಡು ಹೋಗುವ ಪ್ರಣಯ ಮುಗ್ಧರ ಅಭಿಸಾರ! ಆಮೇಲೆ ವಿರಹಿಗಳ ನಿಟ್ಟುಸಿರು, ಪ್ರಣಯ ಚ್ಯುತರ ನಿರಾಶೆಯ ಬೇಗೆ. ಕುಲದಲ್ಲಿ ಕಳಂಕವು ಹರಡುವ ಜ್ವಾಲೆ, ಈ ಜ್ವಾಲೆಗೆ ತುತ್ತಾಗಿ ದಹಿಸಿಹೋಗುವ ಸೌಂದರ್ಯ, ಮಾಧುರ್ಯ, ಸೌಭಾಗ್ಯ, ಒಳ್ಳೆಯತನ, ಕಳಂಕವೂ ಕೂಡ. ಇದಾದಮೇಲೆ ಒಂದು ಉದ್ಯಾನವನ. ಅಲ್ಲಿ ಚಿರಕಾಂಕ್ಷಿತ ಸುಖವೊಂದು ಕೈಗೆ ದೊರೆತಿರುವುದನ್ನು ನಂಬಲಾರದೆ, ನಂಬದಿರಲಾರದೆ ಸ್ವಲ್ಪ ಹೊತ್ತು ಸಂದೇಹಗೊಂಡು, ಕಳವಳ

ಗೊಂಡು, ಆಮೇಲೆ ಈ ಪ್ರಮೋದವು ತಮ್ಮ ಅನುಭವದ ಹಿಡಿತಕ್ಕೆ ಸಿಕ್ಕಿದ ಮೇಲೆ ತಾವೇತಾವಾಗಿ, ವಿಶ್ವಕ್ಕೆಲ್ಲ ತಾವೇ ತಾವಾಗಿ, ನಿಯತಿಯ ಕಟ್ಟಳೆಗಳ ನ್ನೆಲ್ಲಾ ಮೀರಿ, ಜೀವನ್ಮುಕ್ತರಾಗಿ, ಆನಂದಜೀವಿಗಳಾಗುವ ಪ್ರೇಮೋ ನ್ಮತ್ತರ ವಿಹಾರ. ಈ ಆನಂದವೇ ನಿಜ, ಇದೇ ನಿಯತಿಯ ಸತ್ವ, ಇದೇ ಮುಕ್ತಿ, ಉಳಿದುವೆಲ್ಲಾ ಮಾಯೆ—ಅನೃತ....ಎಂದುಕೊಳ್ಳುವಷ್ಟರಲ್ಲಿ ಈ ಕನಸು ಮಾಯವಾಗಿ ಮತ್ತೊಂದು ಕಣ್ಣಿಗೆ ಬೀಳುವುದು.

ಕಾರಿರುಳು. ಅಪಾರವಾದ ಅಕ್ಷುಬ್ಧವಾದ ಪ್ರಶಾಂತ ಸಾಗರ. ಅದರಲ್ಲಿ ತೆರೆಗಳೊಂದೂ ಎದ್ದಿಲ್ಲ. ಸಾಗರವು ಸುಷುಪ್ತಿಯಲ್ಲಿರುವಂತೆ ತೋರುವುದು. ಇದು ಭಯಜನಕವಾದ ಶಾಂತಿ. ಈ ಕಡಲಿನಮೇಲೆ ಮೆಲ್ಲಮೆಲ್ಲನೆ ಒಂಟಿ ದೋಣಿಯೊಂದು ತೇಲುತ್ತಿದೆ. ಚೆಲುವಾದ ಹಗುರವಾದ ಪುಟ್ಟಹೂದೋಣಿ. ಆ ಗಂಭೀರಸಾಗರದ ವಾತಾವರಣಕ್ಕೆ ಈ ದೋಣಿಯು ಹೊಂದಿಕೊಂಡಿರು ವುದಿಲ್ಲ. ಅದು ಅಲ್ಲಿ ತೇಲುತ್ತಿರುವುದು ನಿಯತಿಯ ಪರಿಹಾಸ್ಯದಂತೆ ತೋರು ತ್ತದೆ. ಸಾಗರದ ಅರಿವಿಲ್ಲದೆ, ಅದರ ಲಕ್ಷ್ಯಕ್ಕೆ ಬೀಳದೆ, ಕಳ್ಳತನದಿಂದ ಹುದುಗಿರುವಂತೆ,—ಕಡಲೆಲ್ಲಿ ಎಚ್ಚರಗೊಳ್ಳುತ್ತದೋ, ಆಮೇಲೆ ಅದರ ದೃಷ್ಟಿಗೆಲ್ಲಿ ಬೀಳುತ್ತೇನೋ, ಬಿದ್ದರೆ ಏನಾಗುವುದೊ ಎಂಬ ಭಯದಿಂದ ಅದರ ನಿಶ್ವಾಸಕ್ಕೆ ತಲ್ಲಣಿಸುತ್ತಿರುವಂತೆ ತೋರುತ್ತದೆ.

ಅದರಲ್ಲಿ ತೇಲುವ ಸಾಹಸಿಗರಾರು ?

ಹೆಂಗಸು ! ಹರೆಯದ ಹುಡುಗಿ, ಸುಂದರಿ. ಇದೇನು ಒಬ್ಬಳೇ ಒಬ್ಬಳು —ಅನ್ಯಮನಸ್ಕಳಾಗಿ ಕುಳಿತಿದ್ದಾಳೆ. ಅತಿ ವಿಷಣ್ಣಳಾಗಿದಾಳೆ. ಮುಖದಲ್ಲಿ ನಿರಾಶೆಯ ಮುದ್ರೆಯೊತ್ತಿದೆ. ಕಡಲಿನಲ್ಲಿ ತನ್ನ ಆ ದೋಣಿಯಂತೆ ಪ್ರಣಯದ ಸಾಗರದಲ್ಲಿ ತನ್ನ ಬಾಳನ್ನು ತೇಲಿಬಿಟ್ಟಿರಬಹುದು. ಆಹಾ, ಕಡುಚೆಲುವೆ— ಕಡುಚೆಲುವೆ ! ಪ್ರಿಯನಿಂದ ತಿರಸ್ಕೃತಳಾಗಿ ಸಂಕೇತದಿಂದ ಹಿಂತಿರುಗುತ್ತಿದಾ ಳೇನು ? ಆಮೇಲೆ, ಈಗ ನಿಷ್ಠುರ ಬಂಧುಗಳ ಬಳಿಗೆ ತೇಲಿಹೋಗು ತ್ತಿದಾಳೋ ? ಇಷ್ಟು ಗಭೀರವಾದ ಇರುಳಿನಲ್ಲಿ, ಅಪಾರ ಸಾಗರದಲ್ಲಿ ಈ ಅಸಾಧಾರಣ ಮೌನದಲ್ಲಿ, ಅಮಾನುಷವಾದ ಒಂಟಿತನದಲ್ಲಿ, ಶೋಕಪಾತ್ರೆ ಯಂತೆ ತೋರುತ್ತಿರುವ ಲಘುತಮವಾದ ಆ ನಾವೆಯಲ್ಲಿ ಈ ತಿರಸ್ಕೃತೆ ಎಲ್ಲಿಗೆ ತೇಲಿಹೋಗುತ್ತಿದಾಳೆ ? ಯಾವ ಗತಿಗೆ ?

ನಾನು ತೀರ ಭಯಗೊಂಡೆ, ತೀರ ಕುತೂಹಲಗೊಂಡೆ. ಅಲ್ಲಿಗೆ ಕನಸು ಹರಿಯಿತು. ಕಣ್ಣು ಬಿಟ್ಟೆ; ಆದರೆ ಕನಸಿನ ಪ್ರಭಾವವಳಿಯಲಿಲ್ಲ. ನನ್ನ ಪಾರ್ಥಿವ ಜೀವನಕ್ಕೆ ಪರಿಚಿತವಾದ ವಸ್ತುಗಳು ದೃಷ್ಟಿಗೆ ಬಿದ್ದಮೇಲೆ

ಕನಸು ಕರಗಿಹೋಗಿ ನಾನು ನನ್ನ ಕಿರುಮನೆಯಲ್ಲೇ ಮಲಗಿದೇನೆಂಬ ಅರಿವು ಉಂಟಾಯಿತು. ಎದ್ದು ಹೊರಗಡೆ ನೋಡಿದೆ. ಇನ್ನೂ ಕತ್ತಲು. ರಾತ್ರಿಯ ಮೂರು ಜಾವಗಳು ಮಾತ್ರ ಕಳೆದಿದ್ದವು. ಬ್ರಾಹ್ಮ ಮುಹೂರ್ತವು ಆಗ ತಾನೆ ಪ್ರಾರಂಭವಾಗಿತ್ತು. ಹಾಸಿಗೆ ಬಿಟ್ಟು ಮನೆಯ ಹೊರಗೆ ಹೊರಟು ಬಂದೆ.

ಬ್ರಾಹ್ಮ ಮುಹೂರ್ತವು ಎಷ್ಟು ನೀರವವಾದ ಕಾಲ! ಆ ವೇಳೆಯಲ್ಲಿ ಗಾಳಿ ಕೂಡ ಅಲುಗುವುದಿಲ್ಲ. ಹಕ್ಕಿಗಳು ಕಿಸಿರಿಸುವುದಿಲ್ಲ. ನಿಶಾಚರಜೀವಿಗಳನ್ನು ಸಹ ಮೌನವೊಂದು ಬಿಗಿದಿರುತ್ತದೆ. ತರುಲತಾಗುಲ್ಮಾದಿಗಳೆಲ್ಲವೂ ಮಂತ್ರಮುಗ್ಧವಾದಂತೆ ನೀರವವಾಗುತ್ತವೆ. ಊರಿನಲ್ಲಿಯೂ ಗಾಢವಾದ ಮೌನ, ಅಕ್ಷುಬ್ಧವಾದ ಮೌನ. ರೋಗಿಗಳ ನರಳಿಕೆಯಿಂದಾಗಲಿ ನಾಯಿಗಳ ಬೊಗಳುವಿಕೆಯಿಂದಾಗಲಿ ಈ ಮೌನಕ್ಕೆ ಭಂಗ ಬರುವುದಿಲ್ಲ. ಈ ವಿಚಿತ್ರ ನೀರವತೆಯು ಸೃಷ್ಟಿ ಸುಷುಪ್ತಿಯಲ್ಲಿರುವುದರ ಪರಿಣಾಮವಲ್ಲ; ವಿಶ್ವಚೈತನ್ಯವು ಯಾವುದೋ ಒಂದು ಹೊಸ ಹುಟ್ಟಿಗೆ ವೇದನೆಯಲ್ಲಿರುವ ನೀರವಭಾವ.

ಈ ಮೌನವು ನನ್ನಾತ್ಮವನ್ನಮುಮಿತು. ಕಾತರಗೊಂಡು ಸುತ್ತಲೂ ಹಬ್ಬಿರುವ ಮನೆಗಳನ್ನೂ ಚಿತ್ತಲ ಗಿಡಗಳನ್ನೂ ಬೆಟ್ಟವನ್ನೂ ಉತ್ಸುಕತೆಯಿಂದ ನೋಡಿದೆ. ಈ ಅಚರ ಪ್ರಪಂಚವು ತನ್ನ ಚಿಪ್ಪಿನಲ್ಲಿ ಹುದುಗಿಕೊಂಡು ಯಾವದೋ ಒಂದು ಆವಿರ್ಭಾವವನ್ನು ಉಸಿರು ಹಿಡಿದು ನಿರೀಕ್ಷಿಸುತ್ತಿರುವಂತೆ ತೋರಿತು. ಮೇಲೆ ಬಾನಿನಲ್ಲಿ ಉಜ್ವಲ ನಕ್ಷತ್ರ ರಾಶಿಗಳು ಮಿನುಗದೆ, ಕಣ್ಣೆವೆಯಿಕ್ಕದೆ, ಏಕದೃಷ್ಟಿಯಿಂದ ಕೌತುಕವೊಂದನ್ನು ನಿಟ್ಟಿಸುತ್ತಿರುವಂತೆ ತೋರಿದುವು. ಈ ಕಡೆ ಸೂರ್ಯನು ಉದಿಸುವ ದಿಕ್ಕಿನಲ್ಲಿ ಕೃಷ್ಣ ತ್ರಯೋದಶಿಯ ಕೊಂಬಿನ ಚಂದ್ರನು ಒಂಟಿಯಾಗಿ, ಮ್ಲಾನನಾಗಿ, ವಿವರ್ಣನಾಗಿ, ವಿಷಣ್ಣನಾಗಿ ತೇಲುತ್ತಿದ್ದನು. ಹ್ಞಾ, ಚಂದ್ರನೆಂದೆನೆ? ಅಲ್ಲ ಅಲ್ಲ, ಇದು ಚಂದ್ರನಲ್ಲ. ಆ ತಿರಸ್ಕೃತ ಪ್ರಣಯಿನಿಯ ದೋಣಿಯಿರಬಹುದು. ಆ ಪ್ರೇಮದಗ್ಧಳನ್ನು ಯಾವುದೋ ಒಂದು ವಿಷಾದಾಂತಕ್ಕೆ ಒಯ್ಯುವ ನೌಕೆ! ನನ್ನ ಕನಸಿನ ನನಸು! ಹೌದು ಅದೇ ಸಾಗರ, ಪ್ರಶಾಂತ ಧೀರ ಭೀಮ ಸಾಗರ! ಅದೇ ಮೌನ—ಅಕ್ಷುಬ್ಧ ಸ್ನಿಗ್ಧಮೌನ. ಅದೇ ದೋಣಿ, ಅತಿ ಸುಂದರವಾದ, ಲಘುತರವಾದ ಒಂಟಿ ದೋಣಿ! ಅದೋ, ಅದರಲ್ಲಿ ಕುಳಿತಿರುವ ಆ ಅಪ್ಸರ ಕನ್ಯೆಯ ಅಂಗರೇಖೆಯು ಹೇಗೆ ಕಣ್ಣಿಗೆ ಕಾಣಿಸಿಕೊಳ್ಳುತ್ತಿದೆ! ಈ ಹತಭಾಗ್ಯೆಯನ್ನು ಹೊತ್ತುಕೊಂಡು ಈ ಶೋಕಪಾತ್ರೆ ಎಲ್ಲಿಗೆ ಹೋಗುತ್ತಿದೆ? ಯಾವ ಗತಿಗೆ?

ನಾನು ವಿಷಾದ ಕುತೂಹಲಗಳಿಂದ ನನ್ನ ದೃಷ್ಟಿಯನ್ನು ಆ ದೋಣಿಯ ಮೇಲೆ ನೆಟ್ಟು ಬೆರಗು ಬಡಿದವನಂತೆ ನಿಂತುಬಿಟ್ಟೆ.

ನಾನು ಹೀಗೆ ನಿಂತಿರುವಾಗಲೇ ಬ್ರಾಹ್ಮ ಮುಹೂರ್ತವು ಕಳೆಯಿತು. ಉಷಃ ಕಾಲವು ಪ್ರಾಪ್ತವಾಯಿತು. ವಿವಿಧ ಧ್ವನಿ ಸಂಕುಲದಿಂದ ಮೌನವು ಬಿರಿಯಿತು. ಮೂಡಲು ಬಿಳುಪೇರಿತು. ಜೀವಕ್ಕೆ ನಿಶೆಯ ಸೆರೆಯು ಸಡಿಲಿತು. ಬೂದು ಬೆಳಕೊಂದು ಕತ್ತಲನ್ನು ಪಶ್ಚಿಮದ ಕಡೆಗೆ ತರುಬಿಕೊಂಡು ಹೋಗುತ್ತಿತ್ತು. ನಕ್ಷತ್ರಗಳು ಈ ಅನಾಹುತದ ಕೊನೆಯನ್ನು ನೋಡಲಾರದೆಯೋ ಎಂಬಂತೆ ಮ್ಲಾನವಾಗಿ, ಒಂದೊಂದಾಗಿ ಮರೆಗೊಂಡವು. ಆಮೇಲೆ ಆ ಒಂಟಿ ದೋಣಿ!

ಈಗ ಅದೋ, ಕರೆ ಕಾಣುತ್ತಿದೆ. ಅಲ್ಲಿ ಚಲಿಸುವ ನೆರಳುಗಳೇನು? ಯಾರವು? ಅಲ್ಲೇನು ಸನ್ನಾಹ ನಡೆಯುತ್ತಲಿದೆ? ಆಮೇಲೆ ಈ ದೋಣಿ?

ಕ್ಷಣಕ್ಷಣಕ್ಕೂ ಮುಂದುವರಿದು ಗಳಿಗೆಗಳಿಗೆಗೂ ಮ್ಲಾನತರವಾಗಿ, ವಿವರ್ಣವಾಗಿ, ಮಹಾಸಾಗರ ಮಧ್ಯದಲ್ಲಿ ಅದು ಹೇಗೆ ತಲ್ಲಣಿಸುತ್ತದೆ! ಆ ಕರೆಯನ್ನು ಅದು ಮುಟ್ಟಲೇಬೇಕು.

* * *

ಉಷಸ್ಸು ರಾಗರಹಿತವಾಗಿ ಮೂಡಿ ಸಾಗಿ ಹೋಯಿತು. ಮೂಡಲಲ್ಲಿ ಬೆಳಕು ಬಲಗೊಂಡಿತು. ಈಗ ಕರೆಗೂ ದೋಣಿಗೂ ಒಂದೇ ಒಂದು ಮಾರು ದೂರ ಮಾತ್ರ—ಕೆಲವು ಗಳಿಗೆಗಳ ಅಂತರ. ಅದು ಹೇಗೆ ಬಿಳಿಚಿಕೊಳ್ಳುತ್ತಿದೆ!

* * *

ಸೂರ್ಯಬಿಂಬವು ಚಕ್ರವಾಳದಂಚಿನಲ್ಲಿ ಜಡವಾಗಿ, ಕಾಂತಿಹೀನವಾಗಿ ಒಡೆಯುವುದಕ್ಕೆ ಅಣಿಮಾಡಿಟ್ಟಿರುವ ಚಂಡಿನಂತೆ ಕಾಣಿಸಿಕೊಂಡಿತು. ದೋಣಿಯೋ?

ಹಾ—ನಾನು ನೋಡುತ್ತಿರುವ ಹಾಗೆಯೇ, ನೋಡುತ್ತಿರುವ ಹಾಗೆಯೇ—ಅದು ಹೇಗೆ ಕರಗಿ ಕಣ್ಮರೆಯಾಗಿ ಹೋಯಿತು! ಕರೆಗೆ ತಲುಪಿತೇನು? ಅಥವಾ ಅರೆಗೆ ಬಡಿದು ಮುಳುಗಿಹೋಯಿತೋ?....

ನಾನು ಅವ್ಯಾಜವಾಗಿ ಗಡಗಡನೆ ನಡುಗಿದೆ.

# ರಥಸಪ್ತಮಿ

ಇಂದು ಯದುಗಿರಿಯಲ್ಲಿ ರಥಸಪ್ತಮಿ ಹಬ್ಬ. ಸೂರ್ಯಮಂಡಲ ವಾಹನದ ಉತ್ಸವವೂ ಜನರ ಜಾತ್ರೆಯೂ ಕನಸಿನಂತೆ ಕಳೆದುಹೋದುವು. ದೇವಸ್ಥಾನದಿಂದ ಈಗತಾನೆ ಉತ್ಸವ ಮುಗಿಸಿಕೊಂಡು ಬಂದು ಕುಳಿತಿದ್ದೇನೆ. ಮನಸ್ಸೇಕೊ ಕುಗ್ಗಿ ಹೋಗಿದೆ. ಇಂದು ಈ ಹಬ್ಬಕ್ಕೆ ಹಿಂದಿನ ಪ್ರಭೆಯಿಲ್ಲ. ಜನಗಳಲ್ಲಿ ಅಂದಿನ ಶ್ರದ್ಧೆಯಿಲ್ಲ. ಹಬ್ಬದ ಆತ್ಮವು ಅಳಿದುಹೋಗಿ ಅದರ ನೆರಳಿನ್ನೂ ಈ ದಿನಕ್ಕೆ ಅಂಟಿಕೊಂಡಿರುವಂತೆ ತೋರುತ್ತದೆ. ಹಬ್ಬವು ಆತ್ಮವಂತವಾಗಿದ್ದ ದಿನಗಳಲ್ಲಿ ತಿರುಗಿ ಜೀವಿಸಬೇಕೆಂಬ ಹಂಬಲು ನನಗೆ ಹುಟ್ಟಿದೆ. ಆದರೆ ಅವು ಇರುವುದು ಇಪ್ಪತ್ತುವರ್ಷಗಳಿಂದಾಚೆ. ಅಲ್ಲಿಗೆ ಹೋಗುವುದಕ್ಕೆ ಕಾಲದ ನೆರೆಯಲ್ಲಿ ಸಿಕ್ಕಿ ಕೊಚ್ಚಿಹೋಗುತ್ತಿರುವ ಮರ್ತ್ಯನಿಂದ ಸಾಧ್ಯವಿಲ್ಲ. ಮನಸ್ಸು ತನ್ನ ಅಪ್ಸರೆಯ ನೆರವಿಗೆ ಮೊರೆಯಿಡುತ್ತದೆ. ಆಕೆ ನನ್ನನ್ನು ಕನಸಿನ ದೋಣಿಯೊಂದರಲ್ಲಿ ಕುಳ್ಳಿರಿಸಿಕೊಂಡು ಕಾಲದ ನದಿಯಮೇಲೆ ಹಿಂದಕ್ಕೆ ಒಯ್ಯುತ್ತಾಳೆ.

ಇರುಳು—ಮಾಘ ಶುದ್ಧ ಷಷ್ಠಿಯ ರಾತ್ರಿ. ಮಂದಿಯೆಲ್ಲಾ ಊಟ ಮುಗಿಸಿಕೊಂಡು ಮಲಗುವ ಹೊತ್ತು. ಇತರ ದಿನಗಳಲ್ಲಿ ಇಷ್ಟು ಹೊತ್ತಿಗೆ ಊರಲ್ಲಿ ಸದ್ದಡಗಿ ಜೀವವು ನಿದ್ದೆಯ ಚಿಪ್ಪಿನಲ್ಲಿ ಹುದುಗಿರುತ್ತಿತ್ತು. ಆದರೆ ಇಂದು ಬೀದಿಗಳಿನ್ನೂ ಜನವಿಹೀನವಾಗಿಲ್ಲ. ಮಂದಿ ಮಲಗಿಲ್ಲ. ಕೂಸುಗಳೂ ಎಚ್ಚತ್ತಿವೆ. ಎಷ್ಟು ಸುಂದರವಾದ ರಾತ್ರಿಯಿದು! ಶಿಶಿರ ಋತುವಾದರೂ ಚಳಿ ಮುರಿದಿದೆ; ಮಂಜು ಹರಿದಿದೆ. ಆಕಾಶವು ನಿರ್ಮಲವಾಗಿ, ನಿರಭ್ರವಾಗಿ ಜ್ಯೋತಿರ್ಮಯವಾಗಿದೆ. ಷಷ್ಠಿಯ ಬಾಲಚಂದ್ರನು ತಾರೆಗಳ ಕಾಂತಿಗೆ ಕುಂದು ತಾರದೆ ಅವುಗಳೊಡನೆ ಹೊಂದಿಕೊಂಡು ಆಕಾಶಕ್ಕೆ ಅಪೂರ್ವವಾದ ಒಂದು ಒಡವೆಯಂತೆ ಹೊಳೆಯುತ್ತಿದ್ದಾನೆ. ತಾರಾಚಂದ್ರರ ಮೃದುವಾದ ಮಾಸು ಬೆಳಕು ಇರುಳಿನೊಡನೆ ಹಗೆತನಕ್ಕಿಂತಲೂ ಕೆಳೆತನ ಬೆಳಸುವುದಕ್ಕೆ ಉನ್ಮುಖವಾಗಿರುವಂತೆ ಬೆರೆದು ನಾಡು ತುಂಬಿ ಊರಿಗೆ ಒಂದು ನೂತನ ಶೋಭೆಯನ್ನು ಬೀರಿದೆ. ಈ ಬೆಳಕಿನಲ್ಲಿ ಪುರ ಮಹಿಳೆಯರು ಹಾಡುತ್ತಾ ತಮ್ಮ ಮನೆ ಮುಂದಿನ ನಡುಬೀದಿಯನ್ನು ಸಾರಿಸಿ ಗುಡಿಸಿ ರಂಗವಲ್ಲಿಯನ್ನಿಡುವ ದೃಶ್ಯವು ಕಣ್ಣಿಗೆ ಬೀಳುತ್ತದೆ. ಅವರು ಕಿರುದನಿಯಲ್ಲಿ ಹಾಡುವ ಹಾಡುಗಳೂ ಪಿಸುಮಾತುಗಳೂ ಮಿದುನಗೆಗಳೂ ಆ

ಹೊತ್ತಿಗೆ ಸಹಜವಾದ ನೀರವತೆಯನ್ನು ಕಲಕಿಲ್ಲ. ತಂಬೆಲರ ಸೋಂಕಿಗೆ ಸರಸ್ಸಿನಮೇಲೆ ಕಿರುದೆರೆಗಳೆದ್ದು ಕುಣಿಯುವಂತೆ ಈ ಉಲ್ಲಾಸ ತರಂಗಗಳು ಮೌನದ ಅಂಚಿನಲ್ಲಿ ನಲಿದು ಕುಣಿಯುತ್ತಿವೆ. ಈ ಇರುಳು, ಇರುಳಿನೊಡನೆ ಕೆಳೆ ಬೆಳೆಸುತ್ತಿರುವ ಈ ಎಳೆ ಬೆಳುದಿಂಗಳು, ಈ ಬೆಳುದಿಂಗಳಲ್ಲಿ ಧೂಳೀ ಚಿತ್ರವನ್ನು ರಚಿಸುತ್ತಿರುವ ಕುಲಸ್ತ್ರೀಯರು, ಈ ಸಮಯದ ಮೌನ, ಈ ಮೌನದ ಶಿಶುಗಳಂತೆ ಅದರ ಮಡಿಲಿನಲ್ಲಿ ನಲಿದು ಕುಣಿಯುವ ಈ ಗರತಿಯರ ಗೀತಗಳು, ಮಾತುಗಳು, ಆಗಾಗಿನ ಕೇಕೆಗಳು,—ಇವೆಲ್ಲವೂ ಒಂದ ಪೂರ್ವ ಚಿತ್ರದ ಅವಯವಗಳಂತೆ ಒಂದಕ್ಕೊಂದು ಹೊಂದಿಕೊಂಡಿವೆ. ಒಂದಕ್ಕೊಂದಕ್ಕೂ ಸಹಜವಾದ ಸಂಬಂಧವಿದೆ. ಒಂದಿಲ್ಲದಿದ್ದರೂ ಮಿಕ್ಕವು ಅಪೂರ್ಣ, ಒಟ್ಟಿನ ಚೆಲ್ವಿಕೆಗೆ ಕುಂದು. ಈ ಸೌಂದರ್ಯದ ಏಕತೆಯನ್ನು ದೃಢಗೊಳಿಸಿ ಅದಕ್ಕೆ ಉಸಿರು ಹೊಯ್ಯುವಂತೆ ಆಹ್ಲಾದವೊಂದು ಇವುಗಳೆಲ್ಲವನ್ನೂ ಆಲಂಗಿಸಿದೆ. ಇಂದು ರಂಗವಲ್ಲಿಯ ಹಬ್ಬ. ನಾಳೆ ಹೊತ್ತಾರೆ ರಥಸಪ್ತಮಿ ಹಬ್ಬ. ವರ್ಷಕ್ಕೊಂದು ಹಬ್ಬ, ವರ್ಷಕ್ಕೊಂದು ಉತ್ಸವ. ಅದೂ ಪವಿತ್ರವಾದ ಮಾಘ ಮಾಸದಲ್ಲಿ. ಬೆಳಗಾಗುತ್ತಿರುವ ಹಾಗೆಯೇ ಉತ್ಸವ ಹೊರಟು ಬಂದುಬಿಡುತ್ತದೆ. ಈ ಹಬ್ಬವನ್ನು ಯುಕ್ತರೀತಿಯಲ್ಲಿ ಆಚರಿಸಬೇಕೆಂದು ಊರು ಹಿಂದಿನ ಇರುಳಿನಲ್ಲಿಯೇ ಸಂಭ್ರಮಗೊಂಡಿದೆ. ಕುಲಸ್ತ್ರೀಯರು ಸೂರ್ಯಮಂಡಲಾಧಿರೂಢನಾಗಿ ದೇವದೇವನು ಬಿಜಯ ಮಾಡಿಸುವ ಬೀದಿಗಳನ್ನು ಸಾರಿಸಿ ಗುಡಿಸಿ ರಂಗವಲ್ಲಿಯಿಂದ ಚಿತ್ರಿಸುತ್ತಿದಾರೆ. ಹೀಗೆ ದೇವರ ಉತ್ಸವಕಾಲದಲ್ಲಿ ತಮ್ಮ ತಮ್ಮ ಮನೆಗಳ ಮುಂದಿನ ನಡುಬೀದಿಯನ್ನು ರಂಗವಲ್ಲಿಯಿಂದ ಅಲಂಕರಿಸುವ ಪದ್ಧತಿಯು ಅವರಿಗೆ ಪೂರ್ವಾಚಾರವಾಗಿ ಬಂದ ಮರ್ಯಾದೆ. ಈ ಅಪೂರ್ವವಾದ ಉತ್ಸವದ ದಿನ ಕೇಳಬೇಕೆ? ಇಂದು ಅವರ ಉತ್ಸಾಹವನ್ನು ಹೇಳಿತೀರದು. ಚಿತ್ರರಚನಾಕಾರ್ಯದಲ್ಲಿ ಆಬಾಲವೃದ್ಧೆಯರೂ ತೊಡಗಿದ್ದಾರೆ. ನವವಧುಗಳಿಗೆ ಅತ್ತೆಯರೂ, ಹೆಣ್ಣು ಹುಡುಗಿಯರಿಗೆ ತಾಯಂದಿರೂ ಮನೆಯ ಅಜ್ಜಿಯರೂ ಹೊಸ ಹಸೆಗಳನ್ನು ಕಲಿಸುತ್ತಿದಾರೆ. ಪಲ್ಲಕ್ಕಿ, ತೇರು, ಬಳ್ಳಿಯ ಮನೆ, ಪುಷ್ಪಿತ ವೃಕ್ಷಗಳು, ಗುಲ್ಮಗಳು, ಬೃಂದಾವನ, ಹಂಸ, ಗಂಡಭೇರುಂಡ, ನಾನಾತರದ ಪುಷ್ಪಗಳು, ಸಾಸಿರದಳದ ಕಮಲಗಳು, ಇನ್ನೂ ಚಿತ್ರ ವಿಚಿತ್ರವಾದ ಅಲಂಕಾರಗಳುಳ್ಳ ಚಿತ್ರಗಳು ಇಂದು ಊರಿನ ನಾಲ್ಕು ಬೀದಿಗಳನ್ನೂ ಸಿಂಗರಿಸಿವೆ. ತನ್ನ ಮನೆಯ ಮುಂದೆ ದೊಡ್ಡ ಹೊಸ ಹಸೆಯನ್ನು ಬರೆಯಲು ತೊಡಗಿರುವ ತಾಯೊಬ್ಬಳ ಸೆರಗನ್ನು ಹಿಡಿದುಕೊಂಡು ಐದಾರು ವರ್ಷಗಳ

ಮಗುವೊಂದು ಅವಳ ನೆರಳಂತೆ ಓಡಾಡುತ್ತಾ, ಕುತೂಹಲದಿಂದ ಈ ಕೌತುಕವನ್ನು ನೋಡುತ್ತಿದೆ.

ಅದು ಆ ಸಾಯಂಕಾಲ ಚಿನ್ನದ ರೇಕುಗಳಿಂದ ಥಳಥಳಿಸುತ್ತಿದ್ದ ದೊಡ್ಡ ಸೂರ್ಯಮಂಡಲವಾಹನವು ದೇವಸ್ಥಾನದ ಹೊರಗೆ ಸಜ್ಜಾಗಿದ್ದುದನ್ನು ನೋಡಿತ್ತು. ಅಂದಿಗೆ ಒಂದು ವರ್ಷದ ಹಿಂದೆ ಇಂಥದೇ ಒಂದು ದಿನದಲ್ಲಿ ಹೀಗೆಯೇ ದೇವಸ್ಥಾನದ ಹತ್ತಿರ ನಿಂತಿದ್ದ ಸೂರ್ಯಮಂಡಲವಾಹನವನ್ನು ನೋಡಿ ತಾಯನ್ನು ಇದೇನೆಂದು ಕೇಳಿದಾಗ ಆಕೆ ಹೇಳಿದ ಕಥೆಯನ್ನು ಅದಿನ್ನೂ ಮರೆತಿರಲಿಲ್ಲ. "ನಾಳೆ ಸೂರ್ಯ ತನ್ನ ಹಳೆ ರಥದಿಂದ ಇಳಿದು, ಈ ಹೊಸ ರಥವನ್ನೇರಿ ಸಂಚಾರ ಹೊರಡುತ್ತಾನೆ, ಮಗು.—ತಾನೇರುವುದಕ್ಕೆ ಮುಂಚೆ ದೇವರಿಗೊಪ್ಪಿಸಿ ಪುಣ್ಯ ಪಡೆಯುವುದಕ್ಕೆ ಅದನ್ನು ಇಂದು ಇಲ್ಲಿಗೆ ಕಳುಹಿಸಿದ್ದಾನೆ. ನಾಳೆ ಆತನ ಸಾರಥಿಯೂ ಏಳು ಕುದುರೆಗಳೂ ಬರುತ್ತವೆ. ಸೂರ್ಯನಿಗೂ ನಮ್ಮ ಚೆಲುವರಾಯನನ್ನು ಕಂಡರೆ ಅಷ್ಟು ಶ್ರದ್ಧಾಭಕ್ತಿ. ಹೀಗೆ ರಥ ಕಳುಹಿಸುವುದಕ್ಕೆ ಆತ ಒಂದು ವರುಷವೂ ತಪ್ಪುವುದಿಲ್ಲ" ಎಂದು ಆಕೆ ತನಗೆ ಹೇಳಿದ್ದಳು. ಇಂದು ಆ ರಥ ಬಂದಿದೆ, ನಿಶ್ಚಯ. ನಾಳೆ ಅವರು ಬರುವ ದಿನ. ರೆಕ್ಕೆಗಳುಳ್ಳ ಚಿನ್ನದ ಏಳು ಕುದುರೆಗಳು—ಹಿಂಗಾಲಿನ ಮೇಲೆ ನಿಂತು, ಮುಂಗಾಲುಗಳನ್ನೆತ್ತಿ ಗಾಳಿಯನ್ನು ಕೆರೆಯುವಂತೆ ಒಂದು ಬಿಂಕದಿಂದ ಕೊಂಕಿ, ರೆಕ್ಕೆಗಳನ್ನು ಬಿಚ್ಚಿ, ನಾಲಗೆಯನ್ನು ಹೊರಚಾಚಿರುವ, ದುರ್ದಮ್ಯವಾದ ಏಳು ಕುದುರೆಗಳು ;—ಇವುಗಳೆಲ್ಲಕ್ಕೂ ಕಡಿವಾಣಗಳನ್ನು ಕೋದು, ಲಗಾಮುಗಳನ್ನು ಲೀಲಾಜಾಲವಾಗಿ ಹಿಡಿದುಕೊಂಡು, ದರ್ಪದಿಂದ ನಗುತ್ತಿರುವ ಹುರಿಮೀಸೆ ಹೊತ್ತ ಧೃಷ್ಟನಾದ ಸಾರಥಿ ;—ಇವರೆಲ್ಲರೂ ಆ ಮಗುವಿನ ಗೆಳೆಯರು. ಆ ಸಾರಥಿಯಂತೂ ಇವನ ಪರಮ ಮಿತ್ರ. ಆತನು ಏನು ಠೀವಿಯಿಂದ ಲಗಾಮುಗಳನ್ನು ಹಿಡಿದುಕೊಂಡು ಕುಳಿತಿದ್ದನು. ಅವಕಾಶ ಸಿಕ್ಕಿದರೆ ತಾನೂ ಕುದುರೆಗಳನ್ನು ಆ ಸಾರಥಿಯಂತೆ ದಿಟ್ಟತನದಿಂದ ನಡಸಿಯಾನು. ಹೋದ ವರ್ಷ ಸಾರಥಿಯನ್ನು ಆಶ್ರಯಿಸಿ, ಆತನ ಸ್ನೇಹವನ್ನು ಸಂಪಾದಿಸಿ, ಆ ಕುದುರೆಗಳ ಲಗಾಮನ್ನು ಹಿಡಿದು ಚಾವಟಿಯನ್ನು ಛಟ್ಟೆಂದು ಕೊಡಹಬೇಕೆಂಬ ಆಸೆ ಈ ಮಗುವಿಗೆ ಪ್ರಬಲವಾಗಿತ್ತು. ಆದರೆ ಸಾರಥಿಗೆ ಪುರಸತ್ತಿರಲಿಲ್ಲ; ತನ್ನ ಕಡೆಗೊಂದು ನಗೆ ಬೀರುವುದಕ್ಕೆ ಎಷ್ಟೋ ಅಷ್ಟೆ ಹೊತ್ತು ಆತನ ಅಧೀನದಲ್ಲಿದ್ದುದು. ಮಿಂಚಿನಂತೆ ಬಂದು ಮಿಂಚಿನಂತೆ ಹೊರಟುಹೋದ —ಅಲ್ಲ, ಕನಸಿನಂತೆ ಸುಳಿದು, ಕನಸಿನಂತೆ ಮಾಯವಾದ. ಈ ಸಲವಾದರೂ ಅವ

ನನ್ನು ಅಡ್ಡಗಟ್ಟಿ ಕೇಳಬೇಕು. ಈ ರಾತ್ರಿ ಕಳೆದುಹೋದರೆ—ಬೆಳಗಾಗಿ ಹೋದರೆ—ಅವರು ಬಂದುಬಿಡುತ್ತಾರೆ. ಈ ರಾತ್ರಿ ಏಕೆ ಕಳೆಯಲೊಲ್ಲದೋ ಆ ಮಗು ಕಾಣ. ದೇವಸ್ಥಾನದಲ್ಲಿ ಆರಾಧನೆಯಾದ ಮೇಲೆ ಪ್ರಸಾದ ವಿನಿಯೋಗಕ್ಕೆ ಮಧ್ಯೆ ಬರುವ, ಅರ್ಥವಿಲ್ಲದ, ಆಮೇಲೆ ಎಂದೆಂದಿಗೂ ಮುಗಿಯಲೊಲ್ಲದ, ಪಾಶುರಗಳಂತೆ, ಮಂತ್ರ ಪುಷ್ಪಗಳಂತೆ, ಸ್ತೋತ್ರ ಪಠನಗಳಂತೆ, ತನ್ನ ನಿದ್ದೆಗೂ ತಾನು ಅಮ್ಮನ ಮಗ್ಗುಲಲ್ಲಿ ಮಲಗಿ ಅರಿವಳಿಯುವ ಸುಖಕ್ಕೂ ಮಧ್ಯೆ ಬಂದ ಈ ಕಡೆಗಾಣದ ಹಸೆಯಂತೆ —ಈ ಇರುಳೂ ಒಂದೇನೋ. ಅಭಿಲಾಷೆಗೂ, ಅದರ ಸಾಕ್ಷಾತ್ಕಾರ ಸುಖಕ್ಕೂ ಅಂತರದಲ್ಲಿ ಅರ್ಥವಿಲ್ಲದ ವಸ್ತುಕ್ರಿಯಾತ್ಮಕವಾದ ಕಾಲಪರಿ ಮಾಣವನ್ನು ತಂದೊಡ್ಡುವುದು ನಿಯತಿ ಸಹಜವಾದ ಕೌಟಿಲ್ಯವೆಂದು ಆ ಮಗುವಿಗೆ ತೋರುತ್ತದೆ. ಅದು ಆಕಳಿಸಿ, ಗೊಣಗುಟ್ಟಿ ಗೋಗರೆಯುವುದಕ್ಕೆ ಮೊದಲು ಮಾಡುತ್ತದೆ. ಅಮ್ಮನು ಅದರ ಈ ಗೋಗರೆತಕ್ಕೂ ನಿದ್ರಾ ವಸ್ಥೆಗೂ ಕನಿಕರಗೊಂಡು, ಹಸೆಯನ್ನು ಅರ್ಧದಲ್ಲೆ ಬಿಟ್ಟು, ಅದನ್ನು ಹಾಸಗೆ ಯಲ್ಲಿ ಮಲಗಿಸುತ್ತಾಳೆ, ಮಗುವು ಒಂದು ಗಳಿಗೆಯಲ್ಲಿ ಕನಸಿನ ನಾಡನ್ನು ತಲಪಿ ಈ ಸ್ವರ್ಣ ಸಪ್ತಾಶ್ವ ಸಾರಥಿಗಳ ಕೆಳೆತನದಲ್ಲಿ ಮೋದಗೊಂಡು ನಗುತ್ತದೆ.

ಆ ಇರುಳು ಕಳೆಯಿತು. ಉಷೆಯು ಬಾನಿನ ಜಾರುಗುಪ್ಪೆಯಿಂದ ಜಾರಿ ಹೋಗಿದ್ದಾಳೆ. ಸೂರ್ಯೋದಯವಾಗಿದೆ. ಆದರೆ ಬಿಂಬವಿನ್ನೂ ಯದುಗಿರಿಗೆ ಕಾಣಿಸಿಕೊಂಡಿಲ್ಲ. ಊರಿನಲ್ಲಿ ಜಾತ್ರೆ ನೆರೆಯುತ್ತಿದೆ. ಸುತ್ತಮುತ್ತಲ ಹಳ್ಳಿ ಗಳಿಂದ ಪರಿಷೆಗಳು ಬರುತ್ತಿವೆ. ದೇವಸ್ಥಾನದ ಹತ್ತಿರ ಜನಸಂದಣಿಯು ಉಬ್ಬಿ ಹೋಗುತ್ತಿದೆ. ಜಾತ್ರೆಯ ವಿವಿಧ ಧ್ವನಿಸಂಕಲನವು ದೂರದ ಸಮುದ್ರನಿರ್ಘೋಷದಂತೆದ್ದು ಕನಸಿನ ನಾಡಿನಲ್ಲಿರುವ ಈ ಮಗುವಿನ ಕಿವಿ ಗಳಿಗೆ ಸೋಕುತ್ತದೆ. ಅದಕ್ಕೆ ಆ ಸ್ವರ್ಣ ಸಪ್ತಾಶ್ವ ಸಾರಥಿಗಳ ಕನಸಿನ್ನೂ ಹರಿದಿಲ್ಲ. ಅದು ಈ ಕಲಕಲವನ್ನು ಆ ಕುದುರೆಗಳು ತಮ್ಮ ರೆಕ್ಕೆಗಳನ್ನು ಹೊಡೆದುಕೊಂಡು ಭೂಮಿಗಿಳಿದು ಬರುವ ರಭಸವೆಂದೂ, ಪರಿಷೆಯ ತುತೂರಿಗಳ ಧ್ವನಿ ತುಮುಲವನ್ನು ಅವುಗಳ ಹೇಷಾರವವೆಂದೂ, ಮನೆ ಮನೆಯ ಹಾರುಗಳ ಮೇಲೆ ಹಾಯ್ದು ಹೋಗುವ ಗಾಳಿಯ ಸುಯ್ ಶಬ್ದ ವನ್ನು ಸಾರಥಿಯ ಚಾವಟಿಯ ಲೀಲಾವಿಜೃಂಭಣವೆಂದೂ—ಭಾವಿಸಿಕೊಳ್ಳು ತ್ತಿದೆ. ಇಷ್ಟು ಹೊತ್ತಿಗೆ ಅವರು ಭೂಮಿಯನ್ನು ಮುಟ್ಟಿರಬಹುದು. ಆ ಸುದ್ದಿಯನ್ನು ತನಗೆ ಹೇಳುವುದಕ್ಕೆ ಇದೋ ಈ ಅಪ್ಸರೆಯನ್ನು ತನ್ನ ಬಳಿಗ

ವರು ಇಟ್ಟಿದಾರೆ. ಎಷ್ಟು ಚೆಲುವೆ ಇವಳು. ಇವಳ ಮುಖ ಅಮ್ಮನ ಹಾಗಿದೆ. ಇವಳೇನೋ ಹೇಳುತ್ತಿದ್ದಾಳೆ: "ಮಗು, ಏಳಮ್ಮ, ದೇವರ ಉತ್ಸವ ಹೊರಟಿತು. ನೀನು ಸೂರ್ಯಮಂಡಲ ವಾಹನ ನೋಡೋಲ್ಲವೆ, ಚಿನ್ನದ ಕುದುರೆ ಸಾರಥಿ ಹೂಡಿದ್ದು. ಬೇಗೇಳು." ಎಚ್ಚತ್ತ ಮಗುವು ಕಂಗಳರಸಿ, ತನ್ನ ಮಗ್ಗುಲಲ್ಲಿ ಮಿಂದು ಮಗುಟವುಟ್ಟು ತನ್ನ ತಲೆಯನ್ನು ಅಲ್ಲಾಡಿಸುತ್ತಿರುವ ತಾಯನ್ನು ನೋಡಿ, ಕನಸು ನಿಜವಾಯಿತೆಂದು ಅಚ್ಚರಿಗೊಳ್ಳುತ್ತದೆ. ಆಮೇಲೆ ಜಗ್ಗನೆದ್ದು ಅಮ್ಮನು ಹೇಳುವಂತೆ, ತನಗೆ ಮೀಯಿಸಿ ಮಡಿಯುಡಿಸಿ, ಜಡೆ ಹೆಣೆದು, ಸಿಂಗಾರಮಾಡುವುದಕ್ಕೆ ತನ್ನ ಅಕ್ಕನ ಬಳಿಗೋಡುತ್ತದೆ. ಅಷ್ಟುಹೊತ್ತಿಗೆ ಆಗಲೇ ಅದರ ತಂದೆ ದೇವಸ್ಥಾನಕ್ಕೆ ವೇದಪಾರಾಯಣಕ್ಕೆ ಹೊರಟುಹೋಗಿದ್ದಾರೆ.

ಮಗು ಮಿಂದುದಾಯಿತು. ಮಗುಟವುಟ್ಟುದಾಯಿತು. ಜಡೆ ಹೆಣೆಸಿಕೊಳ್ಳುವುದಕ್ಕೆ ಅದು ತನ್ನಕ್ಕನ ಮುಂದೆ ರಗಳೆಮಾಡದೆ ಕುಳಿತಿದೆ. ಇಂದು ಅದಕ್ಕೆ ಜಡೆ ಹಾಕಿಸಿಕೊಳ್ಳುವುದಕ್ಕೂ ಉತ್ಸಾಹ. ಜಡೆ ಹೆಣೆಸಿಕೊಳ್ಳುತ್ತಾ ಕುಳಿತಿರುವ ಮಗುವಿಗೆ ಜಾತ್ರೆಯ ಮೊದಲಿನ ಅವ್ಯಕ್ತಘೋಷವು ಆಗ, ವಿಂಗಡ ವಿಂಗಡವಾಗಿ, ವೈಯಕ್ತಿಕವಾದ ಅನೇಕ ಧ್ವನಿಗಳಾಗಿ, ಕೇಳಿಬರುತ್ತದೆ. ಅದು ಓಲಗದ ಸ್ವನ, ಇದು ನಗಾರಿಯ ನಾದ, ಅದು ಡೋಲಿನ ಸದ್ದು, ಇದೋ ತುತೂರಿಯ ಧ್ವನಿ, ಅಗೋ ಜನರ ಜಯಘೋಷ, ಆಮೇಲೆ ಇದಿಗೋ ಚೆಲುವನ ಕೊಂಬಿನ ಕೂಗು—ಹಾಗಾದರೆ ದೇವರ ಉತ್ಸವ ಹೊರಟುಬಂದು ತೇರಿನ ಮೂಲೆ ತಿರುಗಿರಬೇಕು.

ಇಷ್ಟುಹೊತ್ತಿಗೆ ಅಕ್ಕನು ಮಗುವಿನ ಜಡೆಯ ಕೊನೆಯನ್ನು ಮುಟ್ಟಿರುತ್ತಾಳೆ. ಇನ್ನೇನು ನಾರು ಹಾಕಿ ಬಿಗಿಯಬೇಕು—ಅಷ್ಟರಲ್ಲಿ ಅದು ಜಡೆಯನ್ನು ಅವಳ ಕೈಯಿಂದ ಕೊಸರಿಕೊಂಡು, ಬೀದಿಗೋಡಿಹೋಗಿ, ಮೂಲೆಯಲ್ಲಿ ನಿಂತು ತೇರಿನ ಬಳಿ ಬರುತ್ತಿರುವ ಉತ್ಸವವನ್ನು ಆತುರದಿಂದ ನೋಡುತ್ತದೆ. ಅಲ್ಲಿ ದೂರದಲ್ಲಿ, ಜನತಾಸಮುದ್ರದ ಚಂಚಲತರಂಗಗಳಂತಿರುವ ತಲೆಗಳ ಮೇಲೆ ಉದಿಸಿ ಬರುವಂತೆ, ದೇದೀಪ್ಯಮಾನವಾಗಿರುವ ಸೂರ್ಯಮಂಡಲವಾಹನದ ವರ್ತುಳವು ಅದರ ಕಣ್ಣಿಗೆ ಬೀಳುತ್ತದೆ. ಅದರ ಮಧ್ಯದಲ್ಲಿ ಚೆಲುವರಾಯ ನಿಂತಿರುವುದು ಮಬ್ಬು ಮಬ್ಬಾಗಿ ಕಾಣಬರುತ್ತದೆ. ಸಾರಥಿಯೂ ಕುದುರೆಗಳೂ ಕಾಣಿಸುವುದಿಲ್ಲ; ಆದರೂ ಸೂಜಿಯಂತಿರುವ ಚಿನ್ನದ ಕಿರಣಗಳನ್ನು ವಾಹನವು ಆಕಡೆಗೀಕಡೆಗೋಲಾಡುವಾಗ ಅವು ಎಸೆದು ಅನುಮೇಯವಾಗಿವೆ. ಉತ್ಸವವು ಅಪೂರ್ವ ಸಂಭ್ರಮದೊಡನೆ

ತನ್ನ ಕಡೆಗೆ ಒಯ್ಯನೆ ಸಾಗಿ ಬರುತ್ತಿದೆ; ಮಗು ಉತ್ಸಾಹದಿಂದ ಕೈ ಚಪ್ಪಾಳೆ ತಟ್ಟಿ ಕುಣಿಯುತ್ತಿದೆ. ಆದರೆ ಆ ವೇಳೆಗೆ ಸರಿಯಾಗಿ ಅಕ್ಕನು ಅದರ ಹಿಂದೆ ಬಂದು ಕೋಪದಿಂದ ರಟ್ಟೆಯನ್ನು ಹಿಡಿದುಕೊಂಡು, ಸಹಜ ಕುತೂಹಲದಿಂದ ಉತ್ಸವ ಬರುತ್ತಿರುವೆಡೆಗೊಂದು ನೋಟವನ್ನೆಸೆದು, ಮಗುವನ್ನು ಬಲವಂತದಿಂದ ಎಳೆದುಕೊಂಡು ಮನೆಗೆ ಹೋಗುತ್ತಾಳೆ. ತುಂಟ ಮಗು; ಸಿಂಗಾರ ಪೂರ್ತಿಯಾಗಿಲ್ಲ, ಜಡೆ ಇನ್ನೂ ಮುಗಿದಿಲ್ಲ; ಆಮೇಲೆ ಜಾತ್ರೆಯ ಸುಗ್ಗಿನಲ್ಲಿ ಜನರ ಕಾಲಿಗೆ ಸಿಕ್ಕಿ, ಅಜ್ಜಿಬಜ್ಜಿಯಾಗಿ ಹೋದರೊ! ಅತ್ತರೇನು—ಮೊರೆದರೇನು—ಅದಕ್ಕೆ ಬುದ್ಧಿಯಿಲ್ಲ. ಜಡೆ ಮುಗಿಯಬೇಡವೆ?—ಮಗು ಮನೆಯಲ್ಲಿ ಸ್ವಲ್ಪ ಹೊತ್ತು ಸೆರೆಯಾಗುತ್ತದೆ.

ಮಗುವಿಗೆ ಅಲಂಕಾರವು ಪೂರ್ತಿಯಾಗಿ ಈಚೆಗೆ ಬರುವ ಹೊತ್ತಿಗೆ ಉತ್ಸವವು ಮುಂದುವರಿದಿದೆ. ಮನೆಮನೆಗಳ ಬಾಗಿಲುಗಳಲ್ಲೂ ಜಗಲಿಗಳ ಮೇಲೂ ಮಿಂದು ದಿವ್ಯದುಕೂಲಗಳನ್ನುಟ್ಟ ಹೆಂಗಸರೂ ಮಕ್ಕಳೂ ಪತ್ರ ಫಲಪುಷ್ಪಗಳನ್ನಿಟ್ಟಿರುವ ಹರಿವಾಣಗಳನ್ನು ಹಿಡಿದುಕೊಂಡು ನಿಂತಿದಾರೆ. ಬೀದಿಯಲ್ಲಿ ಜನಸಂದಣಿ ದಟ್ಟವಾಗುತ್ತಲಿದೆ. ಇಂದವರ ಸಂಭ್ರಮವೇನು, ಉತ್ಸಾಹವೇನು, ಸಿಂಗಾರವೇನು, ದೇವಸಂದರ್ಶನೋತ್ಸುಕತೆಯೇನು, ಶ್ರದ್ಧೆಯೇನು, ಭಕ್ತಿಪಾರವಶ್ಯವೇನು! ಪ್ರತಿಯೊಬ್ಬನಿಗೂ ದೇವಸಾನ್ನಿಧ್ಯ ಸಾಕ್ಷಾತ್ಕರವಾಗಿದೆ. ಅಪೂರ್ವ ದಿವ್ಯ ಸಂತೋಷವೊಂದು ಚೇತನಾಚೇತನ ವಸ್ತುಗಳ ಅಸ್ತಿತ್ವವನ್ನು ತುಂಬಿ ವಾತಾವರಣದಲ್ಲಿ ಹೊರಸೂಸಿದೆ.

ಈ ಜನಜಾತ್ರೆಯಿಂದ ಹೊರಗಾಗಿ, ಒಂಟಿಯಾಗಿ, ಕೊಂಬಿನ ಚೆಲುವನು ಬಿಳಿಯ ದುಪ್ಪಟಿಯನ್ನು ಹೊದೆದು, ಮುಖಕ್ಕೆ ನಾಮವಿಟ್ಟು, ಕಿವಿಗೆ ಜನಸ ಸೆಕ್ಕಿ, ಕೊಂಬಿಗೆ ಹೂವನ್ನು ಸುತ್ತಿ, ಈ ಬೀದಿಯ ಮೂಲೆಯಲ್ಲಿ ನಿಂತಿದಾನೆ. ಅವನು ಉತ್ಸವ ಬರುವ ಕಡೆಗೆ ನೋಡುತ್ತಾ ಬೆನ್ನಿಗಾನಿಸಿಕೊಂಡಿದ್ದ ಕೊಂಬನ್ನು ಕೈಗೆತ್ತಿಕೊಂಡು ಊದುವುದಕ್ಕೆ ಅಣಿಯಾಗುತ್ತಿದ್ದಾನೆ. ಮಗು ಅವನನ್ನು ನೋಡಿ ಕೇಕೆ ಹಾಕಿ ನಗುತ್ತದೆ. ಚೆಲುವನು ಇದರ ಕಡೆಗೆ ತಿರುಗಿ ಬೆಳ್ಳನೆಯ ನಗೆಯೊಂದನ್ನೆಸೆದು ತಲೆಯಲ್ಲಾಡಿಸುತ್ತಾನೆ.

ಚೆಲುವನಿಗೂ ಈ ಮಗುವಿಗೂ ಹಿಂದಿನಿಂದಲೂ ಸ್ನೇಹ. ಚೆಲುವರಾಯನಂತೆ, ಆ ಸ್ವರ್ಣಸಪ್ತಾಶ್ವ ಸಾರಥಿಗಳಂತೆ, ನಿತ್ಯವೂ ತನ್ನ ಕೈಯಿಂದ ತಿಂಡಿ ತಿಂದು ತನ್ನನ್ನು ಕಂಡರೆ ಬಾಲವಾಡಿಸಿ ನೆಗೆಯುವ ನಾಯಿಯಂತೆ, ಈ ಮಗುವಿಗೆ ಚೆಲುವನೂ ಒಬ್ಬ ಸ್ನೇಹಿತ. ಈ ಸ್ನೇಹದಲ್ಲಿ ಮಗುವಿಗೆ ತಾರತಮ್ಯ ಜ್ಞಾನವಿಲ್ಲ. ಇವರೆಲ್ಲರಿಗೂ ಅದು ತನ್ನ ಹೃದಯದಲ್ಲಿ ಒಂದೇ ಸ್ಥಾನ

ಕೊಟ್ಟಿದೆ. ಆದರ ಮನಸ್ಸಿನಲ್ಲಿ ಚೆಲುವನು ಸಾಮಾನ್ಯ ಮನುಷ್ಯನಂತೆ ತೋರಿಲ್ಲ. ಅವನ ನಡವಳಿಕೆಗಳೂ ಮನುಷ್ಯ ಸಾಮಾನ್ಯರ ತೆರನಲ್ಲ.

ಚೆಲುವರಾಯನಂತೆ ಚೆಲುವನೂ ಒಂಟಿ; ಯಾವಾಗಲೂ ಒಂಟಿ. ಚೆಲುವನು ಇನ್ನೊಬ್ಬನೊಡನೆ ಬೆರೆದುದನ್ನು ಹಸುಳೆ ಯಾವಾಗಲೂ ಕಾಣ.

ಚೆಲುವರಾಯನಂತೆ ಚೆಲುವನೂ ಮೌನಿ. ಅವನು ಇತರರೊಂದಿಗೆ ಮಾತಾಡಿದುದನ್ನೂ ಮಗು ಎಂದೂ ಕಂಡುದಿಲ್ಲ.

ಚೆಲುವರಾಯನಂತೆ ಚೆಲುವನೂ ಉತ್ಸವಕಾಲದಲ್ಲಿ ಮಾತ್ರ ಕಣ್ಣಿಗೆ ಬೀಳುವನು. ಉಳಿದ ಕಾಲಗಳಲ್ಲಿ ಅವನೆಲ್ಲಿರುತ್ತಾನೆಂಬುದು ಯಾರಿಗೂ ಗೊತ್ತಿಲ್ಲ. ಹೀಗೆಂದು ಮಗುವಿನ ಭಾವನೆ. ಅಲ್ಲಿ, ಆ ಬೀದಿಯ ಕೊನೆಯಲ್ಲಿ ಬೆಟ್ಟದಮೇಲೆ ಜಾಸು ಕವಿದುಕೊಂಡಿರುವ ಕಡೆಗೆ ಈತನು ನಿತ್ಯವೂ ನಡೆದು ಹೋಗಿ ಮರೆಯಾಗುವುದನ್ನು ಈ ಮಗು ನೋಡಿತ್ತು. ಆ ಗಿರಿಯಾಚೆ ಅವನ ಮನೆಯಂತೆ. ಪ್ರತಿ ದಿನವೂ ಅಲ್ಲಿಗೆ ಹೋಗಿ ಸಹಸ್ರನಾಮಾರ್ಚನೆಯ ವೇಳೆಗೆ ಈ ಊರಿಗೆ ಬರುತ್ತಾನಂತೆ. ಅವನ ಮನೆ ದೂರವಂತೆ. ಬಲು ದೂರವಂತೆ. ಹಾಗೆ ಅಕ್ಕನೊಂದು ದಿನ ತನಗೆ ಹೇಳಿದ್ದಳು. ಮಗುವಿಗೆ ತಿಳಿದಿದ್ದ ಹಾಗೆ ತಮ್ಮೂರಿನಲ್ಲಿ ಚೆಲುವನಿಗೆ ವ್ಯವಹಾರವಿದ್ದುದು ಚೆಲುವರಾಯನೊಬ್ಬನೊಡನೆ ಮಾತ್ರ. ಇವರಿಬ್ಬರಿಗೂ ಯಾವುದೋ ಒಂದು ಅತಿ ನಿಕಟವಾದ ಸಂಬಂಧವಿದೆ ಎಂದು ಮಗು ತಿಳಿದುಕೊಂಡಿತ್ತು. ಗಾಳಿಯ ಪಟಕ್ಕೂ ಅದರ ದಾರಕ್ಕೂ ಇರುವಂತಹ ಸಂಬಂಧ—ಯಾಕೆಂದರೆ ಚೆಲುವ ಕೊಂಬನ್ನು ಹಿಡಿದುಕೊಂಡು ಮುಂದೆ ಬಂದಲ್ಲದೆ, ಚೆಲುವರಾಯ ಹೊರಗೆ ಹೊರಡ. ಚೆಲುವ ಕೊಂಬೂದಿದಲ್ಲದೆ ಆ ದೇವ ದೇವನಿಗೆ ಉತ್ಸವವಿಲ್ಲ, ಪೂಜೆಯಿಲ್ಲ, ಸಹಸ್ರನಾಮಾರ್ಚನೆಯಿಲ್ಲ. ಅಲ್ಲದೆ ಅಂದು ಚೆಲುವರಾಯ ತವರು ಮನೆಯಿಂದ ಉತ್ಸವ ಹೊರಟುಬರುವುದು ತಡವಾಯಿತೆಂದು ದೇವಿಯ ಮೇಲೆ ಮುನಿಸಿಕೊಂಡು ಕುದುರೆ ಹತ್ತಿ ಅರ್ಧ ರಾತ್ರಿಯಲ್ಲಿ ಊರು ಬಿಟ್ಟು ಹೊರಟುಹೋದಾಗ, ದಾರಿಯಲ್ಲಿ ಅಡ್ಡಗಟ್ಟಿ, ಅಪಶಕುನವಾಗಲೆಂದು ಮೊಲವನ್ನು ಮುಂದೆ ಬಿಟ್ಟು, ಆತನನ್ನು ಹಿಂದಿರುಗಿಸಿದವನೂ ಚೆಲುವನೇ. ಅಂದು ಅವನು ಮಾತ್ರ ಇಲ್ಲದೆ ಹೋಗಿದ್ದರೆ ಚೆಲುವರಾಯ ಊರು ಬಿಟ್ಟು ಹೊರಟುಹೋಗುತ್ತಿದ್ದನೇನೊ—ಹೊರಟುಹೋಗಿದ್ದರೆ ಏನುಗತಿಯಾಗುತ್ತಿತ್ತು!

ಚೆಲುವರಾಯನಿಗೂ ಚೆಲುವನಿಗೂ ಇರುವ ಇಂತಹ ಸಮೀಪ ಸಂಬಂಧವೊಂದಕ್ಕಲ್ಲದೆ, ಚೆಲುವನ ಕೊಂಬೂದುವ ಕಲೆಗೂ ಮಗು ಮನಸೋತಿತ್ತು.

ಅವನು ಕೊಂಬನ್ನು ಬಾಯಿಗೆತ್ತಿ ಹಿಡಿದುಕೊಳ್ಳುವ ರೀತಿ, ನಾದವನ್ನು ಹೊರಡಿಸುವ ರೀತಿ, ನಾದದ ನಯ, ತಾನದ ಸೊಗಸು, ಇವುಗಳನ್ನು ಇತರರಾರಲ್ಲಿಯೂ ಅದು ಕಂಡಿರಲಿಲ್ಲ. ಅವನು ಉಸಿರು ಹಿಡಿಯುವುದಾದರೂ ಎಷ್ಟು ಹೊತ್ತು! ಅವನ ಕೊಂಬಿನಿಂದ ಹೊರಟ ಧ್ವನಿಯು ನೀಲದಾಚೆಯಲ್ಲಿರುವ ಸ್ವರ್ಗವನ್ನು ಮುಟ್ಟಿ ದೇವರ ಉತ್ಸವ ಹೊರಟಿತೆಂದು ದೇವತೆಗಳಿಗೆ ಎಚ್ಚರ ಕೊಡುತ್ತಿದ್ದಿತಂತೆ. ಹೀಗೆ ಕೊಂಬೂದುವ ಕಲೆಯನ್ನು ತಾನು ಕಲಿಯಬೇಕೆಂದು ಮಗುವಿಗೆ ಆಸೆ. ಯಾವತ್ತಾದರೊಂದು ದಿನ ಚೆಲುವನನ್ನು ಕೇಳಬೇಕೆಂದು ಅದು ಧೈರ್ಯ ಮಾಡಿಕೊಂಡಿತ್ತು. ಆದರೆ ಆ ದೇವದೂತ ಸುಲಭವಾಗಿ ಸಿಕ್ಕುತ್ತಾನೆಯೇ? ಯಾವತ್ತೋ ಒಂದು ದಿನ ದೇವಸ್ಥಾನದಿಂದ ಅವನು ಹಿಂದಿರುಗಿ ತನ್ನ ಮನೆ ಮುಂದೆ ಹೋಗುತ್ತಿರುವಾಗ ಮಗು ಆ ಸಮಯ ನೋಡಿ, ಅವನೆಡೆಗೋಡಿಹೋಯಿತು. ಆದರೆ ಅದರ ತಾಯಿ ಈ ಸುಳುವನ್ನು ಕಂಡು ಅದನ್ನು ಅರ್ಧ ದಾರಿಯಲ್ಲೆ ತಡೆದು ನಿಲ್ಲಿಸಿ, ಮನೆಗೆ ಹಿಂದಿರುಗಿಸಿ, ಒಳಗೆ ಬರುತ್ತಲೂ ಬೈದು ಮಡಿಬಟ್ಟೆ ಉಡಿಸಿದಳು. ಈ ನಡತೆಯಿಂದ ಮಗುವಿಗೆ ಆಶ್ಚರ್ಯವಾಗಲಿಲ್ಲ. ಹಿಂದೆ ದೇವಸ್ಥಾನದಲ್ಲಿ ತಾನು ಚೆಲುವರಾಯನ ತೀರ ಹತ್ತಿರಕ್ಕೆ ಹೋದಾಗ ಹೀಗೆಯೇ ತಾಯಿಯು ತಡೆದು ನಿಲ್ಲಿಸಿದ್ದರು. ದೇವರಂತೆ ಚೆಲುವನನ್ನೂ ಮುಟ್ಟಬಾರದೇನೊ? ಮಗುವಿಗೂ ಇವರಿಗೂ ಇದ್ದ ಕೆಳೆತನ ಇತರರಿಗೆ ಹೇಗೆ ತಿಳಿಯಬೇಕು? ಬೇರೊಂದು ಸಮಯದಲ್ಲಿ ಯಾರೂ ಕಾಣದಿರುವಾಗ ಚೆಲುವನನ್ನು ಕೇಳೋಣನೆಂದು ಅದು ಸುಮ್ಮನಾಯಿತು. ಅಂಥ ಸಮಯ ಇಂದಿನವರೆಗೂ ಅದಕ್ಕೆ ಒದಗಿರಲಿಲ್ಲ. ಬಯಕೆ ಕನಸಾಗಿ ಉಳಿದಿತ್ತು.

ಇಂದು ಕೊಂಬನ್ನೆತ್ತಿ ಬಾಯಲಿಟ್ಟು ಕೆನ್ನೆಗಳನ್ನು ಕಿತ್ತಿಳೆ ಹಣ್ಣುಗಳಂತೆ ಉಬ್ಬಿಸಿ, ಉಸಿರು ತುಂಬುತ್ತಿರುವ ಚೆಲುವನನ್ನು ಹಸುಳೆ ಗೌರವಾಶ್ಚರ್ಯ ಕುತೂಹಲಗಳಿಂದ ನೋಡುತ್ತಿದೆ. ಕೊಂಬಿನಿಂದ ಗಂಭೀರ ನಾದವೊಂದೆದ್ದು ಬಾನಿನ ಕಡೆಗೆ ಚಿಮ್ಮುತ್ತದೆ. ಆದರೆ ಚೆಲುವನಿಗೆ ಈ ಪ್ರಥಮ ಪ್ರಯತ್ನವು ಸಫಲವಾಗಿ ದೇವತೆಗಳಿರುವ ತಾಣವನ್ನು ಮುಟ್ಟಿತೆಂಬ ನಂಬಿಕೆಯಾಗಲಿಲ್ಲವೇನೊ—ತಿರುಗಿ ಅವನು ಕೊಂಬಿಗೆ ಶ್ವಾಸ ತುಂಬುತ್ತಾನೆ. ಈಗ ನಾದವು ಒಮ್ಮೆಗೇ ಹೊರಟುಹೋಗುವುದಿಲ್ಲ; ಅಷ್ಟುದೂರ ನೆಗೆಯುವುದಕ್ಕೆ ಸಾಕಾಗುವಷ್ಟು ವೇಗವನ್ನು ಗಳಿಸಿಕೊಳ್ಳುವಂತೆ ಕೊಂಬಿನಲ್ಲಿ ಹಿಂದಕ್ಕೂ ಮುಂದಕ್ಕೂ ಜಗ್ಗುತ್ತಾ ಜಗ್ಗುತ್ತಾ ಕೊನೆಗೆ ಬಾನಿನ ಕಡೆಗೆ ತೆರೆದಿರುವ ಬಾಯಿಂದ ಆಗಸಕ್ಕೆ ನೆಗೆಯುತ್ತದೆ: ಕೊಂಬಿನಿಂದ ಹೊರಡುವ

ಈ ಪೀವರನಾದವು ಕ್ರಮೇಣ ಕೃಶಕೃಶವಾಗಿ, ಮೊನಚು ಮೊನಚಾಗಿ ಕೊನೆಗೆ ಕೊಂಬಿಳಿಸುವ ಹೊತ್ತಿಗೆ ಮೌನವಾಗಿ ಕೇಳಿಬರುತ್ತದೆ. ಚೆಲುವನು ಕೊಂಬನ್ನು ತಿರುಗಿ ಬೆನ್ನಿಗಾನಿಸಿಕೊಂಡು, ಮಗುವಿನ ಕಡೆಗಿನ್ನೊಂದು ನಗೆ ಬೀರಿ, ಮುಂದೆ ಸಾಗುತ್ತಾನೆ.

ಮೆರವಣಿಗೆಯ ಮೊದಲಿಗನಾದ ಚೆಲುವನು ಕೊಂಬೂದಿ ಹೊರಟು ಹೋದ ಮೇಲೆ, ಉತ್ಸವದ ಇತರ ಅವಯವಗಳು ಮುಂದುವರಿದು ಈ ಮೂಲೆಯಲ್ಲಿ ಕಾಣಿಸಿಕೊಳ್ಳಲು ಪ್ರಾರಂಭಿಸುತ್ತವೆ. ವಾದ್ಯತತಿಯ ಕೋಲಾಹಲವು ಸ್ಫುಟತರವಾಗಿ ಆಗಸವನ್ನು ತುಂಬುವಂತೆ ಮೊಳಗುತ್ತಿರುವುದು ಕೇಳಿಬರುತ್ತದೆ. ಒಂದು ಗಳಿಗೆಯಾದ ಮೇಲೆ, ಹೆದರಿಕೆ ಹುಟ್ಟಿಸುವಂತೆ ಉದ್ದವಾಗಿ ತುದಿ ಬಗ್ಗಿರುವ, ಚಿನ್ನ ಬೆಳ್ಳಿಯ ಹಿಡಿಗಳಿಂದಲೂ ರೇಷ್ಮೆಯ ಕುಚ್ಚುಗಳಿಂದಲೂ ಅಂದವಾಗಿರುವ ಕೊಂಬುಗಳುಳ್ಳ ಪುಷ್ಟವಾದ ದೊಡ್ಡ ಎತ್ತೊಂದು ಈ ಮೂಲೆಯಲ್ಲಿ ಕಣ್ಣಿಗೆ ಬೀಳುತ್ತದೆ. ಈ ಎತ್ತನ್ನೇರಿ, ಅದರ ಮೇಲೆ ಹೊರಿಸಿರುವ ನಗಾರಿಗಳನ್ನು ಬಿಲ್ಲಿನಂತೆ ಬಗ್ಗಿರುವ ಕಡ್ಡಿಗಳಿಂದ ಮೃದುವಾಗಿ, ಅದೊಂದು ಗತಿಯಲ್ಲಿ ಹೊಡೆದು, ಮಂಜುಳನಾದವನ್ನೆಬ್ಬಿಸುತ್ತಾ ಆರೋಹಿಯೊಬ್ಬನು ಮುಂದುವರಿಯುತ್ತಾನೆ. ಅವನ ಹಿಂದೆ, ತುತ್ತೂರಿ, ಕೊಂಬು, ಕಹಳೆ, ಶಂಖ, ಜಾಗಟೆ ಇವುಗಳ ವಾದನದೊಂದಿಗೆ 'ಗೋವಿಂದ' ನಾಮೋಚ್ಚಾರಣೆಯನ್ನು ಬೆರಸುತ್ತಾ ಪರಿಸೆ ಸಾಲಿಡುತ್ತದೆ. ಇದಾದಮೇಲೆ ಮೃದಂಗ ತಾಳ ತಂತ್ರೀವಾದ್ಯಗಳೊಡನೆ ಶ್ರೀಹರಿಯ ಭಜನೆ ಮಾಡುತ್ತಾ, ಭಕ್ತ್ಯಾವೇಶದಿಂದ ಕುಣಿಯುತ್ತಾ ಸಾಗಿ ಬರುವ ಭಜನೆಯ ಕೂಟಗಳು ಕಣ್ಣಿಗೆ ಬೀಳುತ್ತವೆ. ಸುಗಂಧ ಧೂಮವನ್ನೆರಚುವ ಧೂಪದಾನಿಗಳನ್ನು ಹಿಡಿದುಕೊಂಡು ಬರುವ ಭಕ್ತರು ಅಲ್ಲಲ್ಲಿ ದೃಷ್ಟಿಗೋಚರವಾಗುತ್ತಾರೆ. ಆಮೇಲೆ ಉತ್ಸಾಹದಿಂದುಬ್ಬಿ ಕೀರ್ತನೆಗೆ ಹುಮ್ಮಸ್ಸಿನೊಡನೆ ಡೋಲನ್ನು ಬಾರಿಸುವವನನ್ನು ಮುಂದಿಟ್ಟುಕೊಂಡು ಓಲಗದವರ ಗುಂಪು ಕಾಣಿಸಿಕೊಳ್ಳುತ್ತದೆ. ಈ ಮೇಳದವರ ಮುಂದೆ ಊರ ರಸಿಕರು ನೆರೆದು ತಲೆಯಾಡಿಸಿ ಹುಂಗುಟ್ಟಿ, ಭಲೆ ಎಂದು ರಸಾಭಿಜ್ಞತೆಯನ್ನು ಸೂಚಿಸುತ್ತಾ ಮೆಲ್ಲನೆ ಸಾಗುತ್ತಾರೆ. ಶ್ವೇತಚ್ಛತ್ರಗಳನ್ನೂ, ಧ್ವಜಗಳನ್ನೂ, ಚಾವುಟಿಗಳನ್ನೂ, ಬಿರುದುಗಳನ್ನೂ ಹಿಡಿದಿರುವವರು ಈ ಮೂಲೆಯಲ್ಲಿ ಒಬ್ಬೊಬ್ಬರಾಗಿ ಕಾಣಿಸಿಕೊಂಡು ಇಕ್ಕೆಲದಲ್ಲಿ ಸಾಲುಗೊಳ್ಳುತ್ತಾರೆ. ಇವರ ಹಿಂದುಗಡೆಯೇ ವಾಹನ ಹೊರುವವರ ಹುಂಕಾರವೂ, ವೇದಘೋಷವೂ ಕೇಳಿಬರುತ್ತವೆ. ಕೊನೆಗೆ, ಮಗುವಿನ ಚಿರಕಾಂಕ್ಷಿತವಾದ ಬಯಕೆಯೇ ರೂಪು

ಗೊಂಡಂತೆ ಸೂರ್ಯಮಂಡಲವಾಹನವೂ ಮೂಲೆ ತಿರುಗಿ ದರ್ಶನಕೊಡುತ್ತದೆ.

ಎಷ್ಟು ಸೋಜಿಗವಾದ ನೋಟವದು! ದೇವದೇವನು ತನ್ನ ದಿಕ್ಕಿಗೆ ಅಭಿಮುಖವಾಗುವ ಗಳಿಗೆಯನ್ನು ನಿರೀಕ್ಷಿಸಿಕೊಂಡಿದ್ದವನಂತೆ, ವಾಹನವು ಈ ಮೂಲೆಯನ್ನು ತಿರುಗಿದ ಕ್ಷಣದಲ್ಲಿ, ಸೂರ್ಯನು ಇದಿರು ಬಂಡೆಯ ಮೇಲೆ ಮೈದೋರಿ ಸ್ವಾಮಿಯನ್ನು ಹೊನ್ನಿನ ಕಿರಣಗಳಿಂದ ಅಭಿಷೇಕ ಮಾಡುತ್ತಾನೆ. ಇದರಿಂದ ವಾಹನವು ದೇದೀಪ್ಯಮಾನವಾಗಿದೆ. ಸ್ವಾಮಿಯು ದರ್ಶನಕೊಟ್ಟ ಕ್ಷಣ ಜನರ ಮೈಯಲ್ಲಿ ವಿದ್ಯುತ್ಪ್ರವಾಹವಾದಂತಾಗಿ ಎಲ್ಲರೂ ಒಮ್ಮೆಯೇ ಜಯಜಯಕಾರ ಮಾಡುತ್ತಿದಾರೆ. ಕೈಮುಗಿದು, ಕೆನ್ನೆಗಳನ್ನು ತಟ್ಟಿಕೊಳ್ಳುತ್ತಿದಾರೆ. ಚಿರಕಾಂಕ್ಷಿತವಾದ ಬಯಕೆಗಳನ್ನೂ ಕಷ್ಟ ನಷ್ಟಗಳನ್ನೂ ವ್ಯಸನಗಳನ್ನೂ ಸ್ವಾಮಿಗೆ ಮೊಸಲಿಟ್ಟು, ಕಾಪಾಡೆಂದು ಬೇಡಿಕೊಳ್ಳುತ್ತಿದಾರೆ. ಮಾತೆಯರು ತಮ್ಮ ಕೂಸುಗಳನ್ನೆತ್ತಿ ಕೈಮುಗಿಸುತ್ತಿದಾರೆ. ನಮ್ಮ ಮಗುವಿಗೆ ತಾನೇನು ಮಾಡುತ್ತಿದೇನೆಂಬ ಅರಿವಿಲ್ಲ. ಅದು ಆಶ್ಚರ್ಯದಿಂದ ಮುಗ್ಧವಾಗಿಬಿಟ್ಟಿದೆ. ಅದರ ಮನಸ್ಸಿನಲ್ಲಿ ಅನೇಕ ಭಾವಗಳ ತುಮುಲವೆದ್ದಿದೆ.

ಸೂರ್ಯಮಂಡಲದ ಮಧ್ಯದಲ್ಲಿ ನಿಂತು, ವಿರಾಜಿಸುತ್ತಿರುವ ಈತನಾರು? ತನ್ನ ಪ್ರೇಮಪುತ್ಥಳಿ ಚೆಲುವರಾಯನೇನು! ಹೌದು, ಚೆಲುವರಾಯ. ಇಂದವನ ಬಿಂಕವೇನು, ಠೀವಿಯೇನು, ವಸ್ತ್ರಭೂಷಣಗಳ ಆಡಂಬರವೇನು, ಹೂವಿನ ಸಿಂಗಾರವೇನು, ಪೂಜೆಪುರಸ್ಕಾರವೇನು! ಅದೋ ಅವನ ಕಾಲಿನ ಕೆಳಗೆ ರಥಕ್ಕೆ ಹೂಡಿರುವ ಚಿನ್ನದ ಏಳು ಕುದುರೆಗಳು—ರೆಕ್ಕೆಗಳನ್ನು ಬಿಚ್ಚಿ, ಹಿಂಗಾಲುಗಳ ಮೇಲೆದ್ದು ನಿಂತು, ನೆಗೆಯಲು ಉನ್ಮುಖವಾಗಿರುವ ದೇವಾಶ್ವಗಳು! ಎಷ್ಟು ಮುದ್ದು ಕುದುರೆಗಳವು!—ಆಮೇಲೆ ಇವುಗಳ ಲಗಾಮುಗಳನ್ನು ಹಿಡಿದುಕೊಂಡು ದಿಟ್ಟತನದಿಂದ ಕುಳಿತು ನಗುತ್ತಿರುವ ಹುರಿಮೀಸೆಯ ಸಾರಥಿ. ಇಂದು ಈ ಸಾರಥಿಯೂ ಸಪ್ತಾಶ್ವಗಳೂ ತನ್ನ ಚೆಲುವರಾಯನ ಅಜ್ಞಾಧೀನರು; ಅದಕ್ಕೇ ಅವನಿಗಷ್ಟು ಬಿಂಕ. ಈ ಐಶ್ವರ್ಯದಲ್ಲಿ ತನ್ನನ್ನಾತನು ಮರೆತಿದಾನೇನೊ—ಇಲ್ಲ ಇಲ್ಲ. ಇದೋ ತನ್ನ ಕಡೆಗೋಸರೆಗೊಂಡು ಸ್ವಾಗತಸೂಚಕವಾದ ದಿವ್ಯಸ್ಮಿತವೊಂದನ್ನು ಬೀರುತ್ತಿದಾನೆ. ಆಮೇಲೆ ಅವನು ತಲೆಯನ್ನಲ್ಲಾಡಿಸಿ ನುಡಿಯುತ್ತಿರುವುದೇನು?—"ನೋಡಿದೆಯೋ, ಈ ರಥ, ಈ ಸಾರಥಿ, ಈ ಕುದುರೆಗಳು, ಈ ಜಾತ್ರೆ, ಈ ವಿಜೃಂಭಣೆ, ಈ ತಾಳಮೇಳ, ಈ ಪೂಜೆಪುರಸ್ಕಾರ ಇವುಗಳೆಲ್ಲಾ ನನ್ನ ಹಕ್ಕು. ಈ ಹಕ್ಕಿನಲ್ಲಿ ನಿನಗೂ ಪಾಲುಂಟು—ನೀನಿಲ್ಲಿಗೇರಿಬರುವುದಾದರೆ"-ತನಗೂ ಹಕ್ಕುಂಟು ಎಂದು ಮಗುವಿಗೆ ಗೊತ್ತು. ಅದೋ ಸಾರಥಿಯೂ ತನ್ನ ಕಡೆಗೆ

ತಿರುಗಿ, ಭುಜವನ್ನಲ್ಲಾಡಿಸಿ, ಚಾವಟಿಯುನ್ನು ಕುಣಿಸಿ 'ಬಾ' ಎಂದು ಸನ್ನೆ ಮಾಡುತ್ತಿದ್ದಾನೆ. ಆದರೆ ಈ ಜನತಾ ಸಮುದ್ರವನ್ನು ಹಾಯ್ದು ತಾನಲ್ಲಿಗೆ ಹೋಗುವುದು ಹೇಗೆ? ದೇವರಿಗೆ ಹಣ್ಣು ಕಾಯೊಪ್ಪಿಸಲು ಅಪ್ಪ ಬರುತ್ತಾನೇನೊ. ಅಲ್ಲಿ ವಾಹನದ ಹಿಂದುಗಡೆ ವೇದಪಾರಾಯಣ ಮಾಡುವವರ ಜೊತೆಯಲ್ಲಿ ತಾನೂ ಸ್ವರವೆಳೆಯುವೆ ಇದ್ದರೆ ಕೆಟ್ಟುಹೋದದ್ದೇನು. ಅಪ್ಪ ಅದೇಕೆ ಬರಲೊಲ್ಲ? ಮಗುವು ಉತ್ಸುಕತೆಯಿಂದ ಅವರ ಬರವನ್ನು ನಿರೀಕ್ಷಿಸುತ್ತದೆ. ಕೊನೆಗೆ ಅವರು ಬಂದು, ಹಸುಳೆಯನ್ನೆತ್ತಿಕೊಂಡು, ಫಲಪುಷ್ಪಗಳ ತಟ್ಟೆಯನ್ನು ಕೈಯಲ್ಲಿ ತೆಗೆದುಕೊಂಡು ಜನಸಂದಣಿಯಲ್ಲಿ ನುಸಿದು ವಾಹನದ ಹತ್ತಿರಕ್ಕೆ ಹೋಗುತ್ತಾರೆ. ಮಗು ತನ್ನ ಪುಟ್ಟ ಕೈಗಳಿಂದ ತಟ್ಟೆಯನ್ನು ಮೇಲಕ್ಕೆತ್ತಿ ಭಟ್ಟರ ಕೈಗೆ ಸಮರ್ಪಿಸುತ್ತದೆ. ಅದೇನು ಸಂತೋಷಾಶ್ಚರ್ಯಗಳಿಂದ ದೇವದೇವನನ್ನು ನೋಡುತ್ತಿದೆ! ಅಗೋ ಸಾರಥಿ ಮತ್ತು ಕುದುರೆಗಳು! ನಿಜವಾಗಿ ದೇವಾಶ್ವಗಳವು. ಈ ದಿವ್ಯ ವ್ಯಕ್ತಿ ಸಾನ್ನಿಧ್ಯದ ಸಂತೋಷೋತ್ಕರ್ಷದಲ್ಲಿ ಮಗುವಿನ ಕುತೂಹಲವಳಿದು ಹೋಗಿದೆ, ವ್ಯಕ್ತಿತ್ವವು ಕೊಚ್ಚಿಹೋಗಿದೆ. ಈ ಸಂತೋಷಕ್ಕೆ ಮೇರೆಯಿಲ್ಲ, ಈ ಭಕ್ತಿಗೆ ಸ್ವಾರ್ಥವಿಲ್ಲ, ಈ ಪ್ರೀತಿಗೆ ರಾಗವಿಲ್ಲ, ಈ ಪೂಜೆಗೆ ಫಲಾಪೇಕ್ಷೆಯಿಲ್ಲ. ಈ ಪಾರವಶ್ಯಕ್ಕೆ ತಪಸ್ಸು ಸಾಟಿಯಲ್ಲ. ಆತ್ಮಸಮರ್ಪಣೆಯ ಚರಮಭಾವವದು. ಈ ಭಾವ ಮಗುವಿಗೆ ಮಾತ್ರ ಸಾಧ್ಯ.

ಈ ಸಂಪೂರ್ಣ ನಿವೇದನ ಭಾವದ ನೆರೆ ಇಳಿದು ಮಗುವು ತನ್ನ ಶಿಶುತನಕ್ಕೆ ಹಿಂದಿರುಗುವ ವೇಳೆಗೆ ಹಣ್ಣುಕಾಯಿ ಪೂಜೆ ಸಲಿಸಿ, ಅಪ್ಪ ಮಗುವನ್ನೆತ್ತಿಕೊಂಡು ಹಿಂದಿರುಗುತ್ತಾರೆ. ಕೆಳಗಿಳಿಯುವುದಕ್ಕೆ ಅದೊಪ್ಪದು. ವಾಹನದ ಜೊತೆಯಲ್ಲಿಯೇ ಹೋಗಬೇಕೆಂದು ಅದರಾಸೆ. ಆದರೆ ಅದರ ಮಾತು ಕರ್ತವ್ಯನಿಷ್ಠರಾದ ಅಪ್ಪನ ಕಿವಿಗಳಿಗೆ ಸೋಕದು. ಆದರೂ ಮೋಹದಿಂದ ಆ ಮಗುವನ್ನೆತ್ತಿಕೊಂಡು, ವಾಹನದ ಹಿಂದೆ ವೇದಪಾರಾಯಣ ಮಾಡುತ್ತಿರುವ ವಿಪ್ರ ಗೋಷ್ಠಿಯನ್ನು ತಿರುಗಿ ಸೇರುತ್ತಾರೆ. ವೇದೋಪನಿಷತ್ತುಗಳಂತೆ ಶುದ್ಧವಾದ ಶ್ರದ್ಧಾಪೂತವಾದ ತನ್ನಾತ್ಮವನ್ನು ಆ ವೇದಸ್ವರಗಳ ಮೇಲೆ ತೇಲಿಸಿ, ಸ್ವಾಮಿಯೆಡೆಗೆಯ್ದಿಸಿ, ಉತ್ಸವದೊಂದಿಗೆ ಆ ಮಗು ಮುಂದೆ ಸಾಗುತ್ತದೆ. ಸ್ವಲ್ಪ ಹೊತ್ತಿನ ಮೇಲೆ ದಿಬ್ಬಣವು ಈ ಬೀದಿಯ ಆಚೆಯ ಮೂಲೆಯನ್ನು ತಿರುಗಿ ಕಣ್ಮರೆಯಾಗುತ್ತದೆ.

* * *

ಉತ್ಸವವು ಸಾಗಿಹೋಯಿತು. ಅದರೊಂದಿಗೆ ನನ್ನ ಕನಸೂ ಕಣ್ಮರೆ

ಯಾಯಿತು. ಕಾವಾರಿದ ಕೆಂಡದಂತೆ ನನ್ನ ಬಾಳು ಮಾತ್ರ ಹಿಂಪೆ ಉಳಿದಿದೆ. ಇಂದಿಗೂ ಅಂದಿಗೂ ಅಂತರವೆಷ್ಟು ! ಅಂದಿನ ಉಲ್ಲಾಸವೆಲ್ಲಿ, ಶ್ರದ್ಧೆಯೆಲ್ಲಿ, ಸಂಭ್ರಮವೆಲ್ಲಿ, ಚೈತನ್ಯವೆಲ್ಲಿ, ಪ್ರಭೆಯೆಲ್ಲಿ? ಅಂದಿನ ಜನಜೀವನದ ಸೆರೆಯೆಲ್ಲಿ, ಲೀಲೆಯೆಲ್ಲಿ, ವಿಲಾಸವೆಲ್ಲಿ, ವೈಭವವೆಲ್ಲಿ—? ಅಂತರ್ಜ್ವರವೊಂದು ಜನಜೀವನವನ್ನು ಹೊಕ್ಕು ಅದನ್ನು ಶೋಷಿಸುತ್ತಿರುವಂತೆ ಕಾಣುತ್ತದೆ. ಜನತೆಯಲ್ಲಿ ಶಾಂತಿ ಅಳಿದಿದೆ. ಬೇಸರ ಮೂಡಿದೆ. ಇಂದು ಅದೇ ರಥಸಪ್ತಮಿ ಹಬ್ಬ, ಅದೇ ಸೂರ್ಯಮಂಡಲ ವಾಹನ, ಅದೇ ಸ್ವರ್ಣ ಸಪ್ತಾಶ್ವ ಸಾರಥಿಗಳ, ಅದೇ ಚೆಲುವರಾಯನ ಉತ್ಸವ! ಆದರೆ ಊರ ಮಾತೆಯರಿಗೆ ಅಂದಿನ ಉತ್ಸಾಹವಿಲ್ಲ, ಉಲ್ಲಾಸವಿಲ್ಲ, ಕುತೂಹಲವಿಲ್ಲ, ಆಸಕ್ತಿಯಿಲ್ಲ—ಅಷ್ಟು ಶ್ರದ್ಧೆಯೂ ಇಲ್ಲ. ಬೀದಿಗಳಲ್ಲಿ ಅವಸರವಸರವಾಗಿ ಬರೆದ ಒಂದೆರಡು ರಂಗವಲ್ಲಿಯ ಹಸೆಗಳು ಕಣ್ಣಿಗೆ ಬೀಳುತ್ತವೆ. ಉತ್ಸವ ಹೊರಡುವ ಹೊತ್ತಿಗೆ ಜನವಿನ್ನೂ ನಿಶ್ಶೇಷವಾಗಿ ಎಚ್ಚತ್ತು ಕೂಡ ಇರುವುದಿಲ್ಲ. ಎಚ್ಚತ್ತಿರುವವರಲ್ಲೂ ಕೆಲವರು ಮಾತ್ರ ಮಿಂದಿದ್ದಾರೆ. ವಸ್ತ್ರಭೂಷಣ ವಿಲಾಸದಲ್ಲೂ ಮಂದಿಗಿಂದು ಔದಾಸೀನ್ಯ !—ಇಂದು ಜಾತ್ರೆ ಇಲ್ಲ, ಕಲಕಲವಿಲ್ಲ, ಕೋಲಾಹಲವಿಲ್ಲ, ಎತ್ತಿನ ನಗಾರಿಯಿಲ್ಲ, ಭಜನೆಯ ಕುಣಿತವಿಲ್ಲ, ಧೂಪದ ಸೇವೆಯಿಲ್ಲ, ಪರಿಸೆಯ ತುತೂರಿಯಿಲ್ಲ, ಕೊಂಬಿನ ಚೆಲುವನ ಕೊಂಬಿನ ಕೂಗೂ ಅಡಗಿದೆ. ಸೂರ್ಯಮಂಡಲವಾಹನದ ಚಿನ್ನದ ರೇಕುಗಳುದುರಿವೆ, ಕುದುರೆಗಳ ರೆಕ್ಕೆಗಳು ಮುರಿದಿವೆ, ಸಾರಥಿಯ ಮೀಸೆ ಇಂದು ಅಷ್ಟು ಕಪ್ಪಾಗಿಲ್ಲ, ಹುರಿಯಾಗಿಯೂ ಇಲ್ಲ. ಇಂದಿವರು ಮಾನವರ ಆಟದ ಗೊಂಬೆಗಳ ದರ್ಜೆಗಿಳಿದಿದ್ದಾರೆ. ಇಂದು ಚೆಲುವರಾಯನು ಅಂತರ್ಮುಖನಾಗಿದಾನೆ. ದೃಷ್ಟಿ ನಿಮೀಲಿತವಾಗಿದೆ. ಇಂದವನು ಭೋಗಿಯಲ್ಲ, ಯೋಗಿ ! ಇಂದಿನ ರಥಸಪ್ತಮಿಯೂ ಅಂದಿನ ಉತ್ಸವದ ನೆಳಲು. ಇಂದಿನ ಎಲ್ಲಾ ಹಬ್ಬಗಳಂತೆ, ವ್ರತಗಳಂತೆ, ನೇಮುಗಳಂತೆ, ಉತ್ಸವಗಳಂತೆ ಆತ್ಮವಳಿದು, ಪ್ರಭೆಗುಂದಿ, ಮುಪ್ಪು ಮೂಡಿ, ಸಾವು ಸೋಕಿ, ಉಸಿರು ಮಾತ್ರ ಹೊಯ್ಯುವ ಶ್ರದ್ಧೆಯ ಶವ !—ಬ್ರೌನಿಂಗ್ ಮಹಾ ಕವಿಯು ಉಲ್ಲೇಖಿಸಿರುವ ನಂಬಿಕೆಗೆಟ್ಟ ಸಾಲ್ ಮಹಾ ಚಕ್ರವರ್ತಿಯ ಪ್ರತಿಬಿಂಬ !

ಹೀಗೆ ನಾನು ಅಂದು ಇಂದುಗಳನ್ನು ತುಲನಮಾಡಿ ಮುಂದಿನ ಕಲ್ಯಾಣದಲ್ಲಿ ನಂಬಿಕೆಗೆಟ್ಟು, ಖೇದಗೊಂಡು ಸಾಲ್ ಚಕ್ರವರ್ತಿಯಂತೆ ಕುಳಿತಿರುವಾಗ ಮೃದುಮಂಜುಳವಾದ ನಗೆಯೊಂದು ಕಿವಿಗೆ ಬಿತ್ತು. ವಿಚಿತ್ರವಾದ ನಗು ಅದು. ಭಾವವ್ಯಂಜಕವಾದ ನಗು ಅದು.

“ಅಯ್ಯೊ ಮಂಕೆ, ಇದೇನು ನಿನಗೀ ಹುಚ್ಚು, ದೇವರು ಸಾಯುವುದುಂಟೇನೋ, ಶ್ರದ್ಧೆ ಸಾಯುವುದುಂಟೇನೋ, ಈ ಮುವ್ವತ್ತು ಮೂರು ಕೋಟಿ ಜೀವಗಳಲ್ಲಿ ಹುದುಗಿರುವ ಅಂತರ್ಯಾಮಿಗೆ ಕುಂದುಂಟೇನೋ ? ಹಚ್ಚ ಹಚ್ಚ — ಮಂಕೆ, ಹುಚ್ಚಿ. ಹೊಸ ನೆರೆಗೆ ಇಂಬುಗೊಡುವುದಕ್ಕೆ ಹಳೆಯ ನೀರಿಳಿದು ಹೋಗಿ ಹೊಳೆ ಈಗ ಕೃಶವಾಗಿದೆ ಅಷ್ಟೆ. ಇದಕ್ಕೇಕೆ ತಲ್ಲಣ ? ಅಂದು ಸಾಗಿ ಹೋದ ಮೆರವಣಿಗೆ ಹಿಂದಿರುಗುತ್ತದೆ, ಮಗು. ಸಂದೇಹಬೇಡ–ಆದರೆ ಇನ್ನೊಂದು ತೆರೆದ ಠೀವಿಯಲ್ಲಿ, ರೀತಿಯಲ್ಲಿ, ಬೆಡಗಿನಲ್ಲಿ, ವಿಜೃಂಭಣೆಯಲ್ಲಿ, ಇತೋಽಪ್ಯತಿಶಯವಾದ ವೈಭವದೊಡನೆ !—ಏಳು, ಮಂಕೆ ಏಳು.” !!

ನನ್ನ ಅಪ್ಸರೆಯ ನಗು ಅದು.

# ನಾರಾಯಣನ ಗುಡಿಯಲ್ಲಿ

ಶ್ರೀ ನಾರಾಯಣನ ದೇಗುಲವನ್ನು ನಿಮಗೆ ಪರಿಚಯ ಮಾಡಿಕೊಡುವುದು ಸುಲಭವಲ್ಲ. ನುಡಿಯ ಬಲದಿಂದಲೇ ಅದರ ಭಾವವನ್ನು ನಿರ್ದೇಶಿಸುವುದು ಕಷ್ಟ. ಆದರೂ ನಿಮ್ಮ ಊಹೆಗೆ ಕೈಮರವಾಗಿರಲೆಂದು ಒಂದೆರಡು ಮಾತುಗಳನ್ನು ಹೇಳ ಹೊರಟಿದ್ದೇನೆ.

ಈ ಗುಡಿ ನಮ್ಮೂರಿಗೆ ಅದರ ಆತ್ಮದಂತಿದೆ ಎನ್ನಬಹುದು. ತನ್ನ ಸುತ್ತ ಮುತ್ತಲೂ ಎದ್ದುಬಿದ್ದು ನರಳಿ ನಲಿದು, ಹುಟ್ಟಿ ಸತ್ತು ಸಾಗುವ ನಶ್ವರ ಸಂಸಾರದ ಶಾಶ್ವತ ಸತ್ವದಂತಿದೆ ಎಂದರೆ ಹೆಚ್ಚು ಹೇಳಿದಂತಾಗುವುದಿಲ್ಲ. ನಾನು ಹುಡುಗನಾಗಿದ್ದಾಗ ಇದನ್ನು ಸೃಷ್ಟಿಯ ಕೇಂದ್ರಸ್ಥಾನವೆಂದು ಭಾವಿಸಿಕೊಂಡಿದ್ದೆ. ಸಕಲ ಚರಾಚರ ಪ್ರಪಂಚದ ಸತ್ವವೆಲ್ಲ—ನಮ್ಮತ್ತೆಯು ಹೇಳುತ್ತಿದ್ದ ರಾಕ್ಷಸನ ಪ್ರಾಣದ ಭರಣಿಯಂತೆ, ಅಲ್ಲ ಹಾವಾಡಿಗನ ಬುಟ್ಟಿಯಂತೆ—ಇವರಲ್ಲಿ ಅಡಗಿದೆ ಎಂದೂ ತಿಳಿದುಕೊಂಡಿದ್ದೆ. ಗುಡಿಯ ವಿಮಾನವನ್ನು ಸುತ್ತುಗಟ್ಟಿ ಮಿನುಗುತ್ತಿದ್ದ ತಾರೆಗಳೂ, ಗೋಪುರದಲ್ಲೂ ಪ್ರಾಕಾರದ ತೆನೆಗಳಲ್ಲೂ ಗೂಡು ಕಟ್ಟಿಕೊಂಡು ಹಾರಾಡುತ್ತಿದ್ದ ಹಕ್ಕಿಗಳೂ, ಪ್ರಾಕಾರದಲ್ಲಿ ಮಲಗಿ ಮೆಲುಕು ಹಾಕುತ್ತಿದ್ದ ಎಮ್ಮೆ, ಹಸು ಮತ್ತು ಕರುಗಳೂ, ಬೃಂದಾವನದಲ್ಲಿ ಗರುಕೆಯೊಡಗೂಡಿ ಬೆಳೆದು ಪೂಜೆಗೊಳ್ಳುತ್ತಿದ್ದ ತುಳಸಿಯ ಗಿಡವೂ, ಹೂತಟ್ಟೆಗಳಲ್ಲಿ ತುಂಬಿದ ವಿಧವಿಧ ಪುಷ್ಪಗಳೂ, ವನಮಾಲಿಕೆಯೂ, ಸದಾ ದೇವಪರಿಚರ್ಯೆಯಲ್ಲಿ ಭಾಗಿಗಳಾಗಿ ಅದರಿಂದಲೆ ವ್ಯಕ್ತಿಶಾಲಿಗಳಾಗಿದ್ದಂತೆ ತೋರುತ್ತಿದ್ದ ಮನುಷ್ಯರೂ ಇವರೆಲ್ಲರೂ ನನ್ನಲ್ಲಿ ಈ ಭಾವವನ್ನುಂಟುಮಾಡಿದ್ದರು. ದೇವದೇವನ ಶುಶ್ರೂಷೆಯಲ್ಲಿ ನಿರತರಾಗಿದ್ದ ಈ ಮಾನವರು ಆಗ ನನ್ನ ಕಣ್ಣಿಗೆ ದೇವಲೋಕದ ವ್ಯಕ್ತಿಗಳಂತೆ ಹೇಗೆ ಕಾಣುತ್ತಿದ್ದರು! ದೇಗುಲದ ಹೊರಗೆ ಅವರು ಛಾಯಾಸ್ವರೂಪರು—ಆಟದ ಗೊಂಬೆಗಳಂತೆ. ಅಲ್ಲಿ ಅವರಿಗೆ ಅಸ್ತಿತ್ವವಿಲ್ಲ. ಅವರ ನಡೆನುಡಿಗಳಿಗೆ ಅರ್ಥವಿದ್ದಂತೆ ನನಗೆ ಕಂಡು ಬರುತ್ತಿರಲಿಲ್ಲ. ನಾರಾಯಣನಿಗೆ ಚಾಮರಬೀಸುವ, ಮಂಗಳಾರತಿಯನ್ನು ಹೊತ್ತಿಸಿಕೊಡುವ, ಓಲಗವನ್ನೂದುವ, ವೇದಪಾರಾಯಣವನ್ನು ಹೇಳುವ, ಇತ್ಯಾದಿ ಕೈಂಕರ್ಯಗಳನ್ನು ಬಿಟ್ಟು ಇಲ್ಲಿ ಇವರೇನು ಮಾಡುತ್ತಿದಾರೆ! ಎಂದು ನನಗೆ ಆಶ್ಚರ್ಯವಾಗುತ್ತಿತ್ತು. ದೇಗುಲದಲ್ಲಿ ಅವರಿಗೆ ಏನು ಪದವಿ, ನಾರಾಯಣನೊಡನೆ ಅವರಿಗೆ ಎಷ್ಟು ಬಳಕೆ! ಪರಿಚರ್ಯೆಯಿಂದ

ಅವರಿಗೆ ಈ ಪದವಿ ಮತ್ತು ಈ ಬಳಕೆ ಬಂದಿತ್ತು. ಅಲ್ಲಿ ಪ್ರತಿಯೊಬ್ಬ ನಿಗೂ ಅವನವನಿಗೆ ನಿಯಮಿತವಾದ ಊಳಿಗಗಳಿದ್ದುವು. ಈ ಊಳಿಗದ ಹಕ್ಕನ್ನು ಓಲಗದವನಿಂದ ಅರ್ಚಕನವರೆಗೂ ಅವನವನು ತನ್ನ ಮಾನದಂತೆ ಕಾದಿಟ್ಟುಕೊಂಡಿರುತ್ತಿದ್ದನು. ಅವರವರ ಕೈಯಿಂದ ಹೀಗೆ ಆಯಾ ನಿಯಮಿತ ಕಾರ್ಯಗಳನ್ನು ಮಾಡಿಸಿಕೊಳ್ಳುವುದರಲ್ಲಿ ನಾರಾಯಣನಿಗೆ ಪ್ರೀತಿಯೆಂದೂ ಇತರರು ಯಾರಾದರೂ ಈ ಹಕ್ಕನ್ನು ಕಸಿದುಕೊಂಡರೆ ಆತನಿಗೆ ಅಸಮಾಧಾನವಾಗುತ್ತದೆಂದೂ ನಾನು ಭಾವಿಸಿಕೊಂಡಿದ್ದೆ. ಈ ಶುಶ್ರೂಷೆಯಿಂದ ನಮ್ಮೂರ ಜನರೆಲ್ಲರೂ (ಎಲ್ಲರಿಗೂ ದೇವಾಲಯದಲ್ಲಿ ಊಳಿಗವಿತ್ತು) ನಾರಾಯಣನ ಕುಟುಂಬಕ್ಕೆ ಸೇರಿದ ದಿವ್ಯ ವ್ಯಕ್ತಿಗಳಂತೆಯೂ ಆತನಲ್ಲಿ ತಮ್ಮ ಅಸ್ತಿತ್ವವನ್ನು ತಾವು ಗಳಿಸಿಟ್ಟುಕೊಂಡಿರುವಂತೆಯೂ ನನಗೆ ಕಂಡುಬರುತ್ತಿತ್ತು. ಆಗ ಅವರ ಬಾಳನ್ನು ಹೊಸ ತೇಜಸ್ಸೊಂದು ಆವರಿಸುತ್ತಿತ್ತು. ಅವರ ನಡೆನುಡಿಗಳಿಗೆ ಅರ್ಥವಿರುತ್ತಿತ್ತು. ಈ ಪರಿಚರ್ಯೆಯಲ್ಲಿ ನನ್ನ ಜೊತೆಯ ಹುಡುಗರಲ್ಲಿ ಅನೇಕರಿಗೆ ಅವರವರ ಬಂಧುಮುಖೇನ ಭಾಗ ಸಿಕ್ಕಿತ್ತು. ನನಗೆ ಪಾಲಿರಲಿಲ್ಲ; ಇದರಿಂದ 'ನಾನು ನಾರಾಯಣನಿಗೆ ಹೊರಗಾಗಿದ್ದೇನೆ. ಆತನ ಕುಟುಂಬಕ್ಕೆ ಸೇರಿಲ್ಲ' ಎಂಬ ಭಾವ ಮೊಳೆತು ನನ್ನನ್ನು ಖಿನ್ನನನ್ನಾಗಿ ಮಾಡಿತ್ತು. ಒಮ್ಮೊಮ್ಮೆ ಏನಾದರೂ ಮಾಡಿ ಹೇಗಾದರೂ ಮಾಡಿ ಈ ಸಂಸಾರಕ್ಕೆ ಸೇರಿಕೊಳ್ಳಬೇಕೆಂದು ಪ್ರಯತ್ನಕನಾಗಿ, ನಂದಾ ದೀವಿಗೆಯ ಕುಡಿಯನ್ನು ಹಿಡಿದು ಬತ್ತಿಯನ್ನು ಮೀಟುತ್ತಿದ್ದೆ. ಗುಂಬಾರತಿಯ ಬತ್ತಿಯ ತುಪ್ಪವು ತೀರಿಹೋಗಿ ಜ್ವಾಲೆ ಮುಂಕಾಗಿರುವ ವೇಳೆಯಲ್ಲಿ ಅದನ್ನು ಉದ್ದೀಪನ ಮಾಡುವುದಕ್ಕೆ ಗುಂಬಾರತಿಯವನು ಹತ್ತಿರದಲ್ಲಿ ಇಲ್ಲದಿರುವ ಸಮಯವನ್ನು ನಿರೀಕ್ಷಿಸಿಕೊಂಡಿದ್ದು ಆ ಕೆಲಸವನ್ನು ನಾನು ಮಾಡುತ್ತಿದ್ದೆ. ಇದರಿಂದ ಆ ವೇಳೆಗಳಲ್ಲಿ ಮನಸ್ಸಿಗೆ ಸ್ವಲ್ಪ ಸಮಾಧಾನವಾಗುತ್ತಿತ್ತು. ಆದರೆ ಭಯವಾಗುತ್ತಲೂ ಇತ್ತು.

ಒಂದು ದಿನ ರಾತ್ರಿ, ನನಗಿನ್ನೂ ಚೆನ್ನಾಗಿ ಜ್ಞಾಪಕ—ಹೀಗೆಯೇ ಈ ಪರಿತ್ಯಕ್ತ ಭಾವದಿಂದ ಖಿನ್ನನಾಗಿ ಒಳಗಿನ ಪ್ರಾಕಾರದಲ್ಲಿರುವ ಬೃಂದಾವನವನ್ನು ಒರಗಿಕೊಂಡು ನಿಂತಿದ್ದೆ. ತುಳಸಿಯ ಗಿಡದ ಸಾನ್ನಿಧ್ಯವು ಮನಸ್ಸಿಗೆ ಒಂದು ತೆರದ ನೆಮ್ಮದಿಯನ್ನು ತಂದಿತ್ತು. ಓಲಗದ ರಾಗವೂ, ಅದರೊಡನೆ ತಾನಾಗಿ ಬೆರೆದ ಗಂಟೆಯ ನಾದವೂ ಇರುಳಿನ ಮೌನದ ಮೂಲಕ ಶೋಧಿಸಿ ಬಂದಂತೆ, ತೆಳುವಾಗಿ ಮೃದುವಾಗಿ ಕಿವಿಗಳಿಗೆ ಸೋಕಿದುವು. ಆ ನಾದದಲ್ಲಿ ಎಂಥ ದೌತ್ಯವಿತ್ತು. ಆ ರಾಗವು ಯಾವುದೋ ಒಂದು ಆನಿ

ವರ್ಣನೀಯವಾದ ಸುಖದ ಸಂದೇಶವನ್ನು ನನ್ನ ಬಾಳಿಗೆ ತಂದಿರುವಂತೆ ತೋರಿತು. ಅದು ನನಗೆ 'ಏನು ಹುಚ್ಚಿದು ನಿನ್ನದು; ನಾರಾಯಣನ ಸಂಸಾರಕ್ಕೆ ನೀನು ಸೇರಿಲ್ಲವೆಂದು ನಿನಗೆ ಯಾರು ಹೇಳಿದರು ? ಅವನ ಪ್ರೀತಿಯಿಂದ ಹೊರಗಾದವರಾರೂ ಇಲ್ಲ, ಮಗು, ಅದರಲ್ಲೂ ನಿನ್ನನ್ನು ಕಂಡರೆ ಅವನಿಗೆ ಬಲು ಮೋಹ. ನಿನ್ನ ಕೈಂಕರ್ಯಕ್ಕೆ ಅವನು ಮೆಚ್ಚಿಕೊಂಡಿದ್ದಾನೆ. ಅದಕ್ಕೆ ಪ್ರತಿಯಾಗಿ ಅದೊ ನಿನ್ನೊಡಗೂಡಿ, ನಿನ್ನೊಡನಾಡಿ, ನಿನಗೆ ಸ್ನೇಹಿತರಾಗಿರಲು, ಈ ನಕ್ಷತ್ರವೃಂದವನ್ನೂ ಚಂದ್ರನನ್ನೂ ಕಳುಹಿಸಿದ್ದಾನೆ. ಅಷ್ಟು ಹೊತ್ತಿನಿಂದಲೂ ಅವರು ನಿನಗೆ ಸನ್ನೆ ಮಾಡುತ್ತಿದಾರೆ. ಆದರೂ ನೀನು ಆ ಕಡೆ ತಿರುಗಲೊಲ್ಲೆ' ಎಂದು ಹೇಳುವಂತೆ ತೋರಿತು. ಕುತೂಹಲದಿಂದ ತಲೆಯೆತ್ತಿ ಮೇಲೆ ನೋಡಿದೆ. ನಿಜವಾಗಿಯೂ ಅಲ್ಲಿ ಚಂದ್ರನೂ ನಕ್ಷತ್ರಗಳೂ ನನ್ನನ್ನು ನೋಡಿ ಕಣ್ಮಿಟುಕಿಸಿ, ಹುಬ್ಬುಹಾರಿಸಿ, ಪಿಸುಗುಟ್ಟಿ ಏನೋ ಸನ್ನೆ ಮಾಡುತ್ತಿರುವಂತೆ ತೋರಿದುವು. ನಾನು ಒಂದೆರಡು ಹೆಜ್ಜೆ ಹಾಗೆಯೇ ಮುಂದಿಟ್ಟೆ. ಅವೂ ಮುಂದೆ ಬರುವಂತೆ ಕಂಡವು. ಆಮೇಲೆ ಪ್ರಾಕಾರದ ಸುತ್ತ, ಆಕಾಶಕ್ಕೆ ಮುಖವೆತ್ತಿ, ಓಡಿದೆ. ಅಗೋ ಆಶ್ಚರ್ಯ—ನನ್ನನ್ನು ಅನುಸರಿಸಿ ಅವೂ ಹೇಗೆ ಓಡಿಬಂದವು. ಒಂದು ಸಲಕ್ಕೆ ತೃಪ್ತನಾಗದೆ ಎರಡು ಮೂರು ಸುತ್ತು ಹೀಗೆ ಓಡಿದೆ. ಓಟದ ಮಧ್ಯದಲ್ಲಿ ನಾನು ನಿಂತರೆ ಅವೂ ನಿಲ್ಲುವುವು; ನಡೆದರೆ ಅವೂ ನಿಧಾನವಾಗಿ ನನ್ನನ್ನು ಅನುಸರಿಸಿ ನಡೆಯುವುವು. ಈ ಬಾಗಿಲಿನಲ್ಲಿ ಬಂದು ಆ ಬಾಗಿಲಿನ ಮೂಲಕ ಹೊರಟರೂ ಅಲ್ಲಿಯೂ ಅವು ಸಿದ್ಧವಾಗಿ ಕಾದಿರುವುವು—ನಮ್ಮ ಚೆಲುವರಾಯನಿಗೆ ಛತ್ರಿಚಾಮರಾದಿ ಇಸ್ತಕಪಾಲು ಕಾದಿರುವಂತೆ. ದೇವಸ್ಥಾನದಿಂದ ಮನೆಗೆ ಹೊರಟರೆ ಅಲ್ಲಿಗೂ ಹಿಂಬಾಲಿಸುವುವು. ಅವಕ್ಕೆ ಯಾವ ತೊಡಕೂ ಲಕ್ಷ್ಯವಿಲ್ಲ. ಮರಗಳ ರೆಂಬೆಗಳೊಳಗೆ ಸಿಕ್ಕಿ ಅವನ್ನು ಬಿಡಿಸಿಕೊಂಡು ಸೂರುಗಳ ಮೇಲೆ ಹಾಯ್ದು ಬಂಡೆಬಂಡೆಗಳಂತಿರುವ ಮೋಡಗಳನ್ನೂ ದಾಟಿ ನನ್ನನ್ನು ಬಿಡದೆ ಅನುಸರಿಸಿ ಓಡಿ ಬರುವುವು. ನಾನು ಒಳಗಿದ್ದರೆ ಅವು ಹೊರಗೆ ಕಾದುನಿಂತಿರುವುವು. ಎಂಥ ಗೆಳೆಯರಿವರು ! ಅಂದು ಅಚ್ಚರಿ ನನ್ನ ಬಗೆಯನ್ನು ಬಿಗಿಯಿತು. ನನ್ನ ಸಂದೇಹವು ಕೊನೆಗಂಡಿತು. ಈ ದೇವಜ್ಯೋತಿಗಳಂತೆ ಅವುಗಳ ಸಾಕ್ಷ್ಯವಾಗಿ ನಾನೂ ನಾರಾಯಣನ ಬಳಗಕ್ಕೆ ಸೇರಿಹೋದೆನೆಂಬ ಹಿರಿಯ ಹಿಗ್ಗು ಹುಟ್ಟಿತು. ಮಾರನೆಯ ದಿನದಿಂದ ನಾನು ಸಂಜೆಯಲ್ಲಿ ನನ್ನ ಸೋದರತ್ತೆಯವರು ದೇವಸ್ಥಾನಕ್ಕೆ ಹೋಗುವುದನ್ನು ಹೇಗೆ ಕಾಯುತ್ತಿದ್ದೆ, ಆಮೇಲೆ ಏನು ಠೀವಿಯಿಂದ ನಕ್ಷತ್ರಗಳನ್ನೂ ಚಂದ್ರ

ನನ್ನೂ ಹಿಂಗಾವಲು ಮುಂಗಾವಲು ಬಿಟ್ಟುಕೊಂಡು ಗುಡಿಗೆ ಹೋಗುತ್ತಿದ್ದೆ, ಅಲ್ಲಿ ಪ್ರಾಕಾರದ ಸುತ್ತ ಹೇಗೆ ಕುಣಿದೋಡುತ್ತಿದ್ದೆ, ಆಮೇಲೆ ನಾರಾಯಣ ಸ್ವಾಮಿಯ ಮುಂದುಗಡೆ ಎಷ್ಟು ವಿನಯದಿಂದ ನಿಲ್ಲುತ್ತಿದ್ದೆ ! ಪ್ರಪಂಚದಲ್ಲಿ ಆತನೊಬ್ಬನೆ ಸತ್ವಶಾಲಿಯೆಂದೂ, ಆತನಿಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂದೂ ನಾನು ಹೇಗೆ ಭಾವಿಸಿಕೊಳ್ಳುತ್ತಿದ್ದೆ !

ನಮ್ಮ ಈ ನಾರಾಯಣ ಮೂರ್ತಿಯನ್ನು ಮನುಷ್ಯರಾಗಲಿ ದೇವಶಿಲ್ಪಿಗಳಾಗಲಿ ಶಿಲೆಯಿಂದ ಕಡೆದರೆಂದರೆ ನಮ್ಮವರು ನಂಬುವುದಿಲ್ಲ. ಈ ವಿಗ್ರಹವು ಅಪೌರುಷೇಯವೆಂದೂ, ತನಗೆ ತಾನೇ ಉದ್ಭವಿಸಿತೆಂದೂ, ಅವರ ನಂಬಿಕೆ. ಈ ಮೂರ್ತಿಯ ಪ್ರಶಾಂತ ಚಿತ್ಸೌಂದರ್ಯವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು, ಅದನ್ನು ಧರಿಸಿಕೊಂಡು, ಮನುಷ್ಯನೊಬ್ಬನು ಅದನ್ನು ಕಲ್ಲಿನಲ್ಲಿ ಕೆತ್ತಿಟ್ಟನೆಂದರೆ ನನಗೂ ನಂಬುವುದು ದುಸ್ಸಾಧ್ಯ. ಈ ಅಪೌರುಷೇಯತ್ವದ ನಂಬಿಕೆಯು ವೇದಗಳು ಅಪೌರುಷೇಯಗಳೆಂಬ ನಂಬಿಕೆಯಷ್ಟು ಘನವಾದುದು. ಈ ಸುಂದರ ಶ್ಯಾಮವಿಗ್ರಹಕ್ಕೆ ನಮ್ಮೂರು ಅದು ಹುಟ್ಟಿದಂದಿನಿಂದ ತನ್ನ ಸರ್ವಸ್ವವನ್ನೂ ಮೀಸಲಾಗಿಟ್ಟು ಬಿಟ್ಟಿದೆ. ಜನತೆಯು ಈ ಮೂರ್ತಿಯನ್ನು ತನ್ನ ನಿಧಿಯೆಂದು, ಅಲ್ಲ, ತಂದೆಯೆಂದು ಭಾವಿಸಿಕೊಂಡಿದೆ. ತಮ್ಮ ಸತ್ವವೆಲ್ಲವನ್ನೂ ಈ ಸಂಸಾರೋತ್ತಾರಕನು ತಮಗಾಗಿ ಕಾದಿಟ್ಟುಕೊಂಡಿದಾನೆ ಎಂದವರ ನಂಬಿಕೆ. ಅವರ ಆಸೆಗಳ ಸಮರ್ಪಣೆ ಇಲ್ಲಿ, ಕಂಬನಿಯ ನಿವೇದನ ಇಲ್ಲಿ, ನಚ್ಚಿನ ಭಂಡಾರ ಇಲ್ಲಿ, ಸಂತೋಷದ ಸೂರೆ ಇಲ್ಲಿ. ಈ ಬಾಳಿನಲ್ಲಿ ತಾವು ನಷ್ಟರಿರಬಹುದು. ನೋವಿನಲ್ಲಿ ನರಳಿ, ನಲವಿನಲ್ಲಿ ಮೆರೆದು, ಭವದಲ್ಲಿ ಬಂದಿಗಳಾಗಿರಬಹುದು. ಆದರೆ ಅದೆಷ್ಟು ದಿನ. ಈ ಬದುಕಿನಲ್ಲೂ ಅವನು ತನ್ನ ಸೇವೆಗೆ ತಮ್ಮನ್ನು ವಿನಿಯೋಗಿಸಿಕೊಂಡು ಬಾಳಿಗೆ ಹೀಗೆ ಸಾರ್ಥಕತೆಯನ್ನುಂಟುಮಾಡಿದಾನೆ. ಈ ಬದುಕಾದ ಮೇಲೆ ತನ್ನ ಸನ್ನಿಧಿಗೆ ತಮ್ಮನ್ನು ಕರೆದುಕೊಳ್ಳುತ್ತಾನೆ, ಎಂದವರು ತಿಳಿದುಕೊಂಡಿದಾರೆ. ಈ ಜನಕ್ಕೂ ಈ ಮೂರ್ತಿಗೂ ಇರುವ ತಾತ್ವಿಕ ಸಂಬಂಧ ಇಂಥದೇ ಎಂದು ಹೇಳುವುದು ಕಷ್ಟ. ಒಂದು ಮಾತಿನಲ್ಲಿ ಹೇಳಬಹುದಾದರೆ—ಪ್ರಭುವಿಗೂ ಭೃತ್ಯನಿಗೂ, ತಂದೆಗೂ ಮಗನಿಗೂ, ಪ್ರಿಯನಿಗೂ ಪ್ರೇಯಸಿಗೂ, ಕೆಳೆಯನಿಗೂ ಕೆಳೆಯನಿಗೂ ಯಾವ ಸಂಬಂಧಗಳಿವೆಯೊ, ಅವುಗಳೆಲ್ಲಕ್ಕಿಂತಲೂ ಹೆಚ್ಚು ದೃಢವಾದ, ಹೆಚ್ಚು ಗಾಢವಾದ, ಹೆಚ್ಚು ನಿಜವಾದ ಸಂಬಂಧವು ನಮ್ಮೂರಿನವರಿಗೂ ಈ ಮೂರ್ತಿಗೂ ಇರುತ್ತದೆ ಎನ್ನಬಹುದು. ಕಷ್ಟಗಳ ಸುರಿಮಳೆಯಲ್ಲೂ ಈ ಸಂಬಂಧ ಸಡಿಲುವು

ದಿಲ್ಲ. ನಾರಾಯಣನು ಕಲ್ಯಾಣದಾಯಕನೆಂಬ ನಚ್ಚು ನಂದುವುದಿಲ್ಲ. ಈ ಸಂಬಂಧದ ನಿದರ್ಶನವಾಗಿ ನಾನು ದೇವಸ್ಥಾನದಲ್ಲಿ ಕಂಡ ಒಂದು ದಿನದ ದೃಶ್ಯವನ್ನು ವರ್ಣಿಸಿ ವಿರಮಿಸುತ್ತೇನೆ.

ಬೇಸಗೆಯ ರಜದ ದಿನದ ಒಂದು ಸಂಜೆ, ಪದ್ಧತಿಯ ಮೇರೆಗೆ ಕೊಳದಲ್ಲಿ ಸಂಧ್ಯಾವಂದನೆಯನ್ನು ಮಾಡಿ ದೇವಸ್ಥಾನಕ್ಕೆ ದೇವರ ದರ್ಶನಕ್ಕೆಂದು ಬಂದೆ. ಅಂದು ನಿತ್ಯಕ್ಕಿಂತಲೂ ಹೆಚ್ಚಾಗಿ ಜನರು ನೆರೆದಿದ್ದರು. ಒಂದೆರಡು ಸಲ ಪ್ರಾಕಾರವನ್ನು ಪ್ರದಕ್ಷಿಣೆ ಮಾಡುವ ಹೊತ್ತಿಗೆ ನಾರಾಯಣ ದೇವರಿಗೆ ಅಲಂಕಾರ ಪೂರ್ತಿಯಾಗಿ ಗರ್ಭಗುಡಿಯ ತೆರೆ ತೆಗೆದಿತ್ತು. ಅಲ್ಲಿಗೆ ಹೋಗಿ, ಜನಸಂದಣಿಯಲ್ಲಿ ನುಸಿದು ಮೂರ್ತಿಯ ಹತ್ತಿರ ನಿಂತುಕೊಂಡು ದರ್ಶನ ಮಾಡಿ ಕಣ್ತಣಿದ ಮೇಲೆ ನನ್ನ ಸುತ್ತಮುತ್ತಲೂ ನೆರೆದಿದ್ದ ಮಂದಿಯನ್ನು ನೋಡಹತ್ತಿದೆ.

ಅಲ್ಲಿದ್ದವರಲ್ಲಿ ಹೆಂಗಸರು ಹೆಚ್ಚುಮಂದಿ. ಗಂಡಸರು ಐದೋ ಆರೋ ಜನರಿದ್ದರು. ಅವರೆಲ್ಲರೂ ನನಗೆ ಪರಿಚಿತ ವ್ಯಕ್ತಿಗಳೇ. ಅಗೋ, ನಾಚಿಕೆಯಿಂದ, ಆಗತಾನೆ ಮದುವೆಯಾದ ಗಂಡನ ಮರೆಯಲ್ಲಿ ನನ್ನ ದೃಷ್ಟಿಯಿಂದ ಮುಚ್ಚಿಕೊಳ್ಳಲು ಯತ್ನಿಸುತ್ತಿರುವ ಕಿಶೋರಿ ಯಾರು?—ನಮ್ಮ ಓಣಿಯ ಲಕ್ಷ್ಮಿ: ನಾನೆತ್ತಿಕೊಂಡು ಮುದ್ದಾಡಿದ ಕೂಸು. ಸಾಧ್ಯವಾಗಿದ್ದರೆ ಅವಳು ತನ್ನ ಗಂಡನ ಹತ್ತಿರದಿಂದ ದೂರ ಸರಿದು ಹೋಗುತ್ತಿದ್ದಳು. ಆದರೆ ಅವರಿಬ್ಬರಿಗೂ 'ಗಂಟು' ಬಿದ್ದಿತ್ತು, ಗಂಡ ಒಳ್ಳೆಯ ಸ್ಫುರದ್ರೂಪಿ; ರಸಿಕನೆಂದೂ ತೋರುತ್ತದೆ. ಹುಡುಗ ನೋಡಿ, ನಗುತ್ತಾನೆ. ಇಂದು ಈ ನೂತನ ದಂಪತಿಗಳು ತಮ್ಮ ಸಂಸಾರವು ಸುಸೂತ್ರವಾಗಿ ಸಾಗಲೆಂದು ಈ ಸೂತ್ರಧಾರನಿಗೆ ನಮಸ್ಕಾರ ಮಾಡಿಹೋಗಲು ಕಾಣಿಕೆಯೊಡನೆ ಬಂದಿದ್ದಾರೆ. ಈ ಸಣ್ಣ ಗುಂಪು ಇವರ ಬಳಗವೇನೋ....ಇವರಾರು? ಆಚೆ ಬೀದಿಯ ಲಕ್ಷ್ಮಮ್ಮನವರು. ಅಂದು ಬಂದವರು ಇನ್ನೂ ಈ ಊರಿನಲ್ಲಿಯೇ ಉಳಿದಿದ್ದಾರೆಯೆ? ಅವರ ಗಂಡನಿಗೆ ಅಮಲ್ದಾರಿಕೆಗೆ ಬಡ್ತಿಯಾಯಿತೆಂದು ಈ ಬೆಳಗ್ಗೆ ಊರಲ್ಲೆಲ್ಲಾ ವರ್ತಮಾನ ಹಬ್ಬಿತ್ತು, ನಿಜ.—ಅದಕ್ಕೇ ಇಂದವರ ಹಣ್ಣುಕಾಯಿ ದೇವರಿಗೆ. ಆಮೇಲೆ ಅಗೋ ತೇರುಮೂಲೆಯ ಶೃಂಗಾರಮ್ಮನವರು. ಅವರ ಯಜಮಾನರಿಗೇನೊ ಖಾಯಿಲೆ ಎಂದು ಸಮಾಚಾರ; ಹೇಗಿದೆಯೋ ಕಾಣೆ....ಇದೇನು ಶಾಮಣ್ಣನ ಕುಟುಂಬ ಮತ್ತು ಈ ಪಿಲ್ಟು! ಇದಕ್ಕೇನು ಇಂದಿಷ್ಟು ಸಿಂಗಾರ? ವರುಷದ ಹೆಚ್ಚಿರಬಹುದು. ಪಾಪ, ಇದೊಂದು ಉಳಿದುಕೊಂಡಿದೆ ಅವನಿಗೆ. ಎಲ ಎಲಾ ನಮಗೊಂದು ಊಟಹಾಕಬೇಡವೆ!

....ಇವರಾರು ಹಿಂದೆ ನೆಳಲಂತೆ ನಿಂತಿರುವವರು ? ಓ ನಿತ್ಯಯಾತ್ರೆಯ ವ್ಯಕ್ತಿಗಳು ಓಹೋ ನಮ್ಮತ್ತೆಯೂ ಬಂದಿದ್ದಾಳೆ. ಬರದೇ ಇದ್ದಿದ್ದರೇ ಆಶ್ಚರ್ಯವಾಗುತ್ತಿತ್ತು. ಆಕೆಗೆ ನಮ್ಮನ್ನೂ ಈ ದೈವವನ್ನೂ ಬಿಟ್ಟಮೇಲೆ ತನ್ನದಾಗಿ ಇನ್ನಾರಿದಾರೆ....ಆಮೇಲೆ ಅವಳ ಮಗ್ಗುಲಲ್ಲಿ ಇದಾರು! ಪೀತಾಂಬರಧಾರಿಣಿ !—ಈ ಮುದುಕಿಗೆ ಇದೇನು ಸಿಂಗಾರ—ಇದೇನು ಒಡವೆಗಳು—ಇದೇನು ಚಳತುಂಬುಗಳು, ಚಂದ್ರಮುರುಗಳು, ಅಡ್ಡಿಕೆಗಳು! ಸರಿಸರಿ ಯಾರೀಕೆ?—ಕುಣಿಗಲು ಬೀದಿಯ ಶೇಷಮ್ಮನವರೇ?—ಇದೇನು ವೇಷ ಇಂದಿನವರಿಗೆ? ಈ ಬೆಳ್ಳಿ ತಟ್ಟೆ—ಹಣ್ಣು ಹೂ, ತುಪ್ಪದ ಬಟ್ಟಲು! ನಾನು ಕುಣಿಗಲಬೀದಿಯ ವೆಂಕ್ಟಾಚಾರ್ಯರು ಬಡವರು ಎಂದಿದ್ದೆ. ಅವರಿಗೆ ಈಚೆಗೆಲ್ಲೋ ನಿಧಿ ಸಿಕ್ಕಿರಬೇಕು.

ಅವರ ವಿಚಾರದಲ್ಲಿ ನನಗೆ ಕುತೂಹಲವುಂಟಾಯಿತು. ಅತ್ತೆಯವರನ್ನು ಆಮೇಲೆ ಕೇಳೋಣ ಎಂದುಕೊಂಡು ಶಾಮಣ್ಣನ ತಮ್ಮನನ್ನು ಮಾತಾಡಿಸಿ ಹೊರಕ್ಕೆ ಹೊರಟು ಬರುತ್ತಾ ಇದ್ದೆ. ಹೀಗೆ ಬರುವಾಗ ನಮ್ಮ ಅತ್ತೆಯವರನ್ನೂ ಆ ಶೇಷಮ್ಮನವರನ್ನೂ ಒತ್ತರಿಸಿಕೊಂಡು ಬರಬೇಕಾಯಿತು. ಶೇಷಮ್ಮನವರು ನನ್ನ ಅತ್ತೆಯವರಿಗೆ 'ನಿಮ್ಮ ಸೋದರ ಅಳಿಯನಲ್ಲವೆ' ಎಂದರು. ಅವರು 'ಹೂ' ಎಂದು 'ಶೇಷಮ್ಮ ಕಣೋ' ಎಂದು ನನಗೆ ಹೇಳಿದರು. ನಾನು ಶೇಷಮ್ಮನವರ ಕಡೆಗೆ ತಿರುಗಿ ತಲೆ ಬಗ್ಗಿಸಿ ನಿಂತುಕೊಂಡೆ. ಆಕೆ 'ಯಾವಾಗ ಬಂದೆ ಮಗು-ವಿದ್ಯಾವಂತನಾದೆ ಮರೆತುಬಿಟ್ಟೆಯಪ್ಪ' ಎಂದರು. ಈ ನೈಜವಾದ ಮಮತೆಯ ಮಾತುಗಳನ್ನು ಕೇಳಿ ನನಗೆ ಬಹಳ ನಾಚಿಕೆಯಾಯಿತು—ಆಮೇಲೆ ಅವರ ಮುಖವನ್ನೊಂದು ಸಲ ನೋಡಿದೆ. ನೋಡಿ ಮನಸ್ಸಿಗೆ ಹೇಗೆ ಹೇಗೋ ಆಯಿತು-ಪೀತಾಂಬರದ ವೈಭವಕ್ಕೂ ಆ ಮುಖಮುದ್ರೆಗೂ ಅರ್ಥಾರ್ಥ ಸಂಬಂಧವಿರಲಿಲ್ಲ. ಅವರ ಸುಕ್ಕಿದ ಮುಖವು ಅಂದು ತೀರ ಒಣಗಿಹೋಗಿತ್ತು—ಮುಖದಲ್ಲಿ ಒಂದು ಬಗೆಯ ನಗೆಯಿದ್ದರೂ ಆ ನಗುವಿನ ಎರಡು ತುದಿಗಳೂ ಕಂಬನಿಯಲ್ಲಿ ಅದ್ದಿರುವಂತೆ ತೋರಿ ಬಂತು. ನಾನು ನೆಳಲು ನಗೆ ನಕ್ಕು 'ಹಾಗುಂಟೆ' ಎಂದೆ. ಆಮೇಲೆ 'ಅತ್ತೆ, ದೇವರ ದರ್ಶನವಾಯಿತೆ? ಮನೆಗೆ ಹೋಗೋಣವೆ?' ಎಂದು ಕೇಳಿದೆ. ಅವರು 'ಹೂ' ಬರುತ್ತೇನೆ ಎಂದವರು ಶೇಷಮ್ಮನವರಿಗೆ, 'ಹೀಗೆಯೇ ಸಂಸಾರ, ದಿನ ಕಳೆದುಹೋಗುತ್ತೆ—ಅವನಿಚ್ಛೆ' ಎಂದು ಹೇಳಿ, ದೇವರಿಗೆ ಕೈಮುಗಿದು ಹೊರಟು ಬಂದರು. ಅವರು ಗರ್ಭಗುಡಿಯ ಹೊಸಿಲನ್ನು ದಾಟಿದ ಕ್ಷಣ, ನಾನು ಶೇಷಮ್ಮನವರ ಪೀತಾಂಬರದ ಮಾತನ್ನೆತ್ತಿ ವ್ಯಂಗ್ಯವಾಗಿ 'ಅದೇನತ್ತೆ?'

ಎಂದೆ. ಅವರು ಉತ್ತರವಾಗಿ ನುಡಿದ ಮಾತು ನನ್ನ ಬಾಳನ್ನು ಒಂದು ಕ್ಷಣ ಕಾಲ ತಲಕೆಳಕು ಮಾಡಿತು. ಶೇಷಮ್ಮನವರ ವಿಚಾರದಲ್ಲಿ ಮಹದಪಚಾರ ಪಟ್ಟೆನೆಂದು ಭಯವಾಯಿತು. ಚಿನ್ನದ ಬಾಗಿಲಿನ ಹತ್ತಿರ ಹಿಂದಿರುಗಿ ಗರ್ಭ ಗುಡಿಯನ್ನು ನೋಡಿದೆ. ದೇವರ ಮೇಲೆ ಹೊಸ ಬೆಳಕೊಂದು ಬಿದ್ದಿರುವಂತೆ ತೋರಿತು.

ಶೇಷಮ್ಮನವರಿಗೆ ಒಬ್ಬನೇ ಒಬ್ಬ ಮಗ. ಬಹಳ ಕಷ್ಟಪಟ್ಟು ತಂದೆತಾಯಿ ಗಳಿಬ್ಬರೂ ಅವನಿಗೆ ಇಂಗ್ಲಿಷನ್ನು ಓದಿಸಿದರು. ಈ ದೇಶದಲ್ಲಿ ಕೆಲಸ ಸಿಕ್ಕದೆ ಎಷ್ಟು ಬೇಡವೆಂದರೂ ಕೇಳದೆ ಆತ ಬೊಂಬಾಯಿಗೆ ನಾಲ್ಕು ವರ್ಷಗಳ ಹಿಂದೆ ಹೋಗಿ ಅಲ್ಲಿ ಕೆಲಸವೂ ಸಿಕ್ಕಿ ಕೈತುಂಬಾ ಸಂಪಾದಿಸುತ್ತಿದ್ದ. ಮದುವೆ ಮಾಡಬೇಕೆಂದು ತಂದೆತಾಯಿಗಳಿಬ್ಬರೂ ಒಳ್ಳೆಯ ಮನೆತನದ ಹೆಣ್ಣೊಂದನ್ನು ಗೊತ್ತುಮಾಡಿದ್ದರು. ಆದರೆ ದೈವದ ಚಿಂತೆ ಬೇರೆಯಾಗಿತ್ತು. ಹೋದ ಮಾರನೆಯ ವರ್ಷವೇ ಆತ ಬೊಂಬಾಯಿನಲ್ಲಿ ತೀರಿಕೊಂಡ. ತೀರಿಕೊಂಡ ಕೆಲವು ದಿನಗಳ ಹಿಂದೆ ತನ್ನ ತಾಯಿಗೆ ಪೀತಾಂಬರವೊಂದನ್ನು ತಾನು ಸಂಪಾದಿಸಿ ಮಿಗಿಸಿದ ಹಣದಲ್ಲಿ ಕೊಂಡು ಕಳುಹಿಸಿದ್ದ. ಆಕೆ ಅದನ್ನು ಉಟ್ಟುಕೊಂಡುದನ್ನು ಆತ ನೋಡಲಿಲ್ಲ. ಆತನು ದೇವರ ಪಾದಾರವಿಂದ ವನ್ನು ಸೇರಿದ ದಿನ ಈ ಸೀರೆಯನ್ನುಟ್ಟುಕೊಂಡು ದೇವರಿಗೆ ಸೇವೆ ಸಲ್ಲಿಸಿದರೆ ಆತನಾತ್ಮಕ್ಕೆ ತೃಪ್ತಿಯಾಗುತ್ತದೆಂದು ಶೇಷಮ್ಮನವರು ಈ ಅಲಂಕಾರದಿಂದ ದೇವಸ್ಥಾನಕ್ಕೆ ಬಂದಿದ್ದರು.

ಅಂದಿನಿಂದ ದೇವರಿದ್ದಾನೆಯೇ? ದೇಹವಳಿದ ಮೇಲೆ ಜೀವ ಉಳಿಯು ತ್ತದೆಯೇ, ಎಂಬ ಪ್ರಶ್ನೆಗಳು ನನ್ನಲ್ಲಿ ತಲೆದೋರುವಾಗೆಲ್ಲಾ ಶೇಷಮ್ಮ ನವರ ನೆನಪು ಮನಸ್ಸಿಗೆ ಬರುತ್ತದೆ. ಈ ಪ್ರಶ್ನೆಯ ಬೇತಾಳವು ಆಗ ನನ್ನನ್ನು ಬಿಟ್ಟುಹೋಗುತ್ತದೆ.

"ನೀನು ಸುಳ್ಳು, ನಿನ್ನ ಈ ಗುಡಿ ಪೊಳ್ಳು" ಎಂದು ಆಗಾಗ ನಾನು ಬುದ್ಧಿಯ ಮೋಸಕ್ಕೆ ಸಿಕ್ಕಿ ನಾರಾಯಣನನ್ನೂ ಆತನ ಮಂದಿರವನ್ನೂ ಅಪನಂಬಿಕೆಯಿಂದ ತೆಗಳಿದಾಗ ಆತ ದಿವ್ಯಸ್ಮಿತವನ್ನು ಬೀರಿ ಅದರ ಬೆಳಕಿನಲ್ಲಿ ಶೇಷಮ್ಮನವರಂತಹ ಹಲವಾರು ಜೀವರುಗಳನ್ನು ತೋರಿ "ನಿನ್ನ ಬುದ್ಧಿ ಪೊಳ್ಳೊ ನಾನು ಪೊಳ್ಳೊ" ಎನ್ನುತ್ತಾನೆ. ನಾನು ಸೋಲನ್ನೊಪ್ಪಿಕೊಂಡು ಶಾಂತನಾಗುತ್ತೇನೆ.

# ಪೈಲ್ ಮಾಳಿಗೆ ಉತ್ಸವ

ನೇಹಿಗ, ಭವಿಷ್ಯ ಹೇಳುವುದರಲ್ಲಿ ನೀನು ಗಟ್ಟಿಗ. ನಿನ್ನ ನಾಲಗೆಯಲ್ಲಿ ಮತ್ತಿ ಇರಬೇಕು. ನೀನು ಹೇಳಿದಂತೆಯೇ ನಾನು ಈ ದಿನ ಎರಡು ಗಂಟೆಯ ಅವಧಿಯ ಪ್ರಯಾಣವನ್ನು ಆರು ಗಂಟೆಗೆ ಮುಗಿಸಿದೆ. ಬಸ್ಸಿನಲ್ಲಿ ಕೂತು ಕೂತು ಉಸ್ಸೆಂದೆ ಬುಸ್ಸೆಂದೆ. ಈ ದಿನ ಅಮಾವಾಸ್ಯೆ ಎಂದು ನೀನು ಹೇಳಬೇಡವೆ? ಪುಣ್ಯಕ್ಷೇತ್ರ; ತರ್ಪಣವನ್ನಾದರೂ ಬಿಡಬಹುದಾಗಿತ್ತು. ಅದಕ್ಕೆ ಬದಲು ದಾರಿಯ ಒಂದು ಹೋಟೆಲಿನಲ್ಲಿ ಎಂಜಲು ದೋಸೆ ಗಸಿ ಕಾಫಿ ಕುಡಿದು ಮೈಲಿಗೆಯಾದುದಾಯಿತು. ತಿಂಡಿ ಕೊಟ್ಟವಳು ಹುಡುಗಿ. ಅದೊಂದೇ ಚೆನ್ನು ಆ ಹೋಟೆಲಿನಲ್ಲಿ. ಮನೆ ತಪ್ಪಿದವಳೆಂದು ಕಾಣುತ್ತದೆ, ಪಾಪ. ಆಕೆ ಚೆನ್ನೆಂಬುದು ನನಗೆ ತಿರುಗಿ ಬಸ್ಸಿನಲ್ಲಿ ಕುಳಿತುಕೊಂಡಾಗ ಹೊಳೆಯಿತು ನೋಡು. ಇನ್ನೂ ಸ್ವಲ್ಪ ಹೊತ್ತು ಇದ್ದು ಇನ್ನೆರಡು ದೋಸೆ ತಿನ್ನಲಿಲ್ಲವಲ್ಲಾ ಎಂಬ ಪಶ್ಚಿಮಬುದ್ಧಿಯ ಆತ್ಮಾನುತಾಪದೊಡನೆ ಒಂದು ಗಂಟೆಯ ಕಾಲ ಬಸ್ಸಿನಲ್ಲಿ ಕುಳಿತಿದ್ದೆ. ಆ ಹೋಟೆಲಿನ ಚಾವಡಿಯ ಮೇಲಾದರೂ ಕುಳಿತಿರಬಹುದಾಗಿತ್ತು, ನನ್ನ ಜೊತೆಯ ಪ್ರಯಾಣಿಕರಂತೆ. ಏನೋ ಒಂದು ತೆರದ ಬಿಗುಮಾನ, ನಾಚಿಕೆ, ಹೊರತನ. ಈ ನಾಚಿಕೆ ಏಕೆ ಎಂದು ನಾನು ಅನೇಕ ಸಲ ನನಗೇ ಪ್ರಶ್ನೆ ಹಾಕಿಕೊಂಡಿದ್ದೇನೆ. ಈ ದಿನ ಹೀಗೆ ಹೊಳೆಯುತ್ತದೆ—ಪ್ರಪಂಚವೆಲ್ಲಾ ನನ್ನಲ್ಲಿ ಕುತೂಹಲಗೊಂಡಿದೆ ಎಂಬ ಒಂದು ತೆರದ ಹೆಚ್ಚು ತಿಳಿವಳಿಕೆ. ನನ್ನಲ್ಲಿ ಏನೋ ಒಂದು ಅನರ್ಘ್ಯವಾದದ್ದು ಇದೆ, ಅದನ್ನು ಬಚ್ಚಿಟ್ಟುಕೊಳ್ಳುವುದಕ್ಕೆ ಭದ್ರವಾದ ಜಾಗ ಎಲ್ಲೂ ಇಲ್ಲವೆ, ಪೆಟ್ಟಿಗೆ ತೆರೆದೇ ಇದೆಯಲ್ಲಾ, ಎಲ್ಲರಿಗೂ ಇದರಮೇಲೆಯೇ ಕಣ್ಣಲ್ಲವೆ ಎಂದು. ಹುಟ್ಟಿನಿಂದ ಸಾಯುವವರೆಗೂ ಈ ಮೆರವಣಿಗೆ–ಬರುವ ವೈನೆರೆದ–ಹುಡುಗಿತನ ನನಗೆ ಏಕೆ ತಗಲಿಕೊಂಡಿದೆಯಯ್ಯಾ.—ಸರಿ, ಹೀಗೆ ನನ್ನನ್ನೂ ನನ್ನ ಈ ಪ್ರಯಾಣವನ್ನೂ ಬಣ್ಣಿಸುತ್ತಾ ಕುಳಿತುಕೊಂಡರೆ ಈ ಕಾಗದವೂ ಆ ಪ್ರಯಾಣದಂತೆಯೇ ಆಗುತ್ತದೆ.

ಅಂತು ಮೂರು ಗಂಟೆಯ ಹೊತ್ತಿಗೆ ಊರು ಮುಟ್ಟಿದೆ. ನಾಣಿಗೂ ಬಸ್ಸಿನ ನಿಲ್ದಾಣದಲ್ಲಿ ನಿಂತು ನಿಂತು ಸಾಕಾಗಿ ಹೋಗಿತ್ತು. ಎಂಥ ಮೂರ್ಖ, ಊಟ ಮಾಡದೆ ಕಾದಿದ್ದನಲ್ಲ. ನಾನು ಬೈದುದಕ್ಕೆ ಅಮಾವಾಸ್ಯೆಯ ದಿನ ಅಭ್ಯಾಗತನನ್ನು ಬಿಟ್ಟು ಊಟ ಮಾಡುವುದೇ ಎಂದ. ಈ

ದಿನ ಅಮಾವಾಸ್ಯೆ ಎಂದು ತಿಳಿದ ಮೇಲೆ ಎದೆಯಲ್ಲಿ ಎಂಥ ಅಳುಕು ಮೂಡಿತು ಎನ್ನುತ್ತೀಯಾ. ಉಪವಾಸ ಮಾಡಿಬಿಡೋಣವೇ ಎನ್ನಿಸಿತು; —ನೆಪ ಏನು ಹೇಳಬೇಕು:—ತೋಚಲಿಲ್ಲ. ನನ್ನ ಈ ಕರೆಕರೆಯನ್ನು ತೋರಿ ಸಿಕೊಳ್ಳುವುದಕ್ಕೂ ನಾಚಿಕೆ. ಸರಿ, ಪುಷ್ಕಳವಾಗಿ ಊಟ ಮಾಡಿದೆ. ನಾಚಿಕೆ ದುರ್ಗುಣವೆಂದು ಪೂರ್ತ ಹೇಳುವಹಾಗಿಲ್ಲ. ಅದರಲ್ಲೂ ಪ್ರಯೋಜನ ಉಂಟು.

ಊಟವಾದ ಮೇಲೆ ನಾಣು, ನೀನು ಎಲ್ಲಿ ಈ ದಿನ ಬಾರದೆ ಹೋಗು ತ್ತೀಯೋ ಎಂದು ದಿಗಿಲು ಬಿದ್ದಿದ್ದೆ ಎಂದ. ಈ ದಿನದ ಮಹತ್ವವೇನೆಂದರೆ ಇಂದು ವೈಲುಮಾಳಿಗೆಯ ಉತ್ಸವ!

ಬಿಸಿಲು ಮಾಳಿಗೆ ಎಂದರೆ ನಾಣುವಿಗೆ ಸಾಲದು. ವೈಲುಮಾಳಿಗೆ ಎಂದೇ ಈ ಉತ್ಸವವನ್ನು ಕರೆಯಬೇಕು. ನಿಜವಾಗಿ ಇದೊಂದು ತರಹ ಸೊಗಸಾದ ಉತ್ಸವ. ಅವರೂರಿನಲ್ಲಿ ಹೊರತು ಬೇರೊಂದು ಕಡೆ ಇಂಥದನ್ನು ನೋಡುವ ಹಾಗಿಲ್ಲ.

ನಾಣು ಜೊತೆಗಿದ್ದರೆ ಈ ಊರು ಎಷ್ಟು ರಮ್ಯವಾಗುತ್ತದೆ. ನಾನೊ ಬ್ಬನೇ ಕೆಲವು ಸಲ ಇಲ್ಲಿಗೆ ಬಂದಿದ್ದೇನೆ. ನೀನು ಹೇಳಿದುದೆಲ್ಲ ನಿಜ ಎಂದು ಕೊಂಡಿದ್ದೇನೆ. ಆದರೆ ನಾಟಕದ ಕಂಪೆನಿಯ ಹಗಲ ಬೆಲೆವೆಣ್ಣು ರಾತ್ರಿಯಲ್ಲಿ ರಂಗದಮೇಲೆ ಎಂಥ ಮೋಹಿನಿ, ಎಂಥ ಸಾವಿತ್ರಿ, ಎಂಥ ಸೀತೆ! ಹಾಗೆ ನೋಡು, ಈ ಊರು ನಾಣುವಿನ ಮನೋರಂಗದಲ್ಲಿ ಮೋಹಿನಿಯಾಗಿ ನನಗೆ ಕಾಣಬರುತ್ತದೆ. ಈ ಸಲ ನಾನು ಇಲ್ಲಿ ಅನೇಕ ಸೌಂದರ್ಯಗಳನ್ನು ಕಂಡೆ. ಗುಡಿ, ಜನ ಎಲ್ಲಾ ಅತ್ಯಂತ ಸುಖಪ್ರದವಾಯಿತು. ಈ ವೈಲ್ ಮಾಳಿಗೆ ಉತ್ಸವ ಎಂಥ ವಿನೋದದ ಉತ್ಸವವಿದು; ನೀನೂ ಬಂದಿದ್ದರೆ ಎಷ್ಟು ಚೆನ್ನಾಗಿತ್ತು.

ಈ ಉತ್ಸವವನ್ನು ಅಮಾವಾಸ್ಯೆಯ ಕಗ್ಗತ್ತಲೆಯಲ್ಲಿ ಏಕೆ ಏರ್ಪಡಿಸಿ ದರೋ ಕಾಣೆ. ಈ ರಸಿಕತೆಗೆ ಎಷ್ಟು ಹೇಳಿದರೂ ತೀರದು. ಹುಣ್ಣಿಮೆ ಯಲ್ಲಿ ಇದು ನಡೆದಿದ್ದರೆ ಇದಕ್ಕೆ ಈ ತೆರದ ಸೊಗಸು ಬರುತ್ತಿರಲಿಲ್ಲ. ಅಸುರನನ್ನು ಕೊಂದು ವಿಷ್ಣು ಅಟ್ಟಹಾಸದಿಂದ ಮನೆಗೆ ಬರುವ ಬಗೆ ಈ ಉತ್ಸವದಲ್ಲಿ ಪ್ರದರ್ಶಿತವಾಗುತ್ತದೆ. ಅದಕ್ಕೆಯೇ ಕಗ್ಗತ್ತಲು ಭೋಗ್ಯವಾ ಯಿತು ದೇವರಿಗೆ ಈಪೊತ್ತು. ಬಹು ಸುಂದರ ಈ ಬೇಸಗೆಯ ಕತ್ತಲೆ. ಊರು ಬೆಟ್ಟದ ಮೇಲೆ ಇರುವುದರಿಂದ ಗಾಳಿ ಬೀಸುತ್ತದೆ. ಈ ತಂಗಾಳಿಗೆ ಮೈಯೊಡ್ಡಿದರೆ ಕಾವೇರಿ ಮಳಲಮೇಲೆ ಹರಿದು ಬಂದು ತನ್ನ ತೆರೆಕೈಗಳಿಂದ ನಮ್ಮನ್ನು ತಂಪಾಗಿ ತಡಹುತ್ತಿರುವಂತೆ ಹಾಯಾಗುತ್ತದೆ. ಸುತ್ತಲೂ ಬೆಟ್ಟ.

ಆಕಾಶ ಚಿಕ್ಕದು. ಅದರ ತುಂಬ ನಕ್ಷತ್ರ ಕಾಡುಮೊಲ್ಲೆಯ ಬಳ್ಳಿ ತುರುಗಲು ತುಂಬ ಹೂ ಬಿಟ್ಟಂತೆ. ತಂಗಾಳಿಯ ನರುಗಂಪು ಈ ನಕ್ಷತ್ರಗಳದೋ ಎಂಬಂತೆ ಒಂದೊಂದು ಸಲ ತೋರಿಬರುತ್ತದೆ, ಗುಡಿಯ ಮೇಲಿನ ಪ್ರಾಕಾರಕ್ಕೆ ನಾವೇರಿದಾಗ.

ಈ ಉತ್ಸವ ಜರುಗುವುದು ಗುಡಿಯ ಮೇಲಿನ ಬಿಸಿಲು ಮಾಳಿಗೆಯ ಪ್ರಾಕಾರಗಳಲ್ಲಿ. ಅದು ಇದರ ವೈಶಿಷ್ಟ್ಯ. ಸಾಮಾನ್ಯರಿಗೆ ವರ್ಷಕ್ಕೊಂದೇ ಸಲ ಇಲ್ಲಿಗೆ ಪ್ರವೇಶ. ದೇವರು ಬಿಜಯಮಾಡುವುದು ಇಲ್ಲಿಗೆ ಗುಟ್ಟಿನಲ್ಲಿ. ಏಕೋ ಕಾಣೆ. ಚಿನ್ನದ ಬಾಗಿಲಿನಲ್ಲಿ ದೀವಟಿಗೆ ಛತ್ರಿ ಚಾಮರ ಬಿರುದು ಬಾವಲಿಗಳನ್ನು ಹಿಡಿದುಕೊಂಡು ಮೇಳ ಮೊಳಗುತ್ತಿರಲು, ಭಕ್ತಜನ ಕಾದಿರುವಾಗ, ಬೇರೊಂದು ಬಾಗಿಲಿನಿಂದ ಒಂಟಿ ದೀವಟಿಗೆ ಮುಖವೀಣೆಯೊಡನೆ ಚೆಲುವರಾಯ ಮೈಲುಮಾಳಿಗೆಗೆ ರಹಸ್ಯವಾಗಿ ಬಿಜಯ ಮಾಡಿಸುತ್ತಾನೆ. ಹಾಗೆ ಆತ ಬಿಸಿಲು ಮಾಳಿಗೆ ಸೇರಿದ ಮೇಲೆ ಕಹಳೆಯ ಸನ್ನೆಯಾಗುತ್ತದೆ. ಆಗ ಈ ಛತ್ರಿ ಚಾಮರ ತಾಳಮೇಳದವರ ಸಂಭ್ರಮದ ಓಟವನ್ನು ನೀನು ನೋಡಬೇಕು. ಬಿದ್ದುಬೀಳ ಓಡುತ್ತಾರೆ. ಹರೆಯದವರಿಗೆ ಈ ಗುಂಪಿನೊಡನೆ ಓಡುವುದಕ್ಕೆ ಬಲು ಉತ್ಸಾಹ. ನಾನು ಅಂಥ ಸಾಹಸ ಮಾಡಲಿಲ್ಲ—ಅದೇ ನಾಚಿಕೆ. ನಾಣು ಓಡಿದ. ಮತ್ತೆ ಹಿಂದಕ್ಕೆ ಬಂದು ನನ್ನ ಹ್ವೈದ. ರಟ್ಟೆಯೆಳೆದುಕೊಂಡು ಜನದ ಮಧ್ಯೆ ನುಗ್ಗಿಸುತ್ತಾ ನನಗೆ ಬಹು ತೊಂದರೆ ಕೊಟ್ಟ.

ಊರಿನ ಎಲ್ಲ ಜನ ಅಂದು ಗುಡಿ ತುಂಬ, ಮೇಲಿನ ಬಯಲು ತುಂಬ ನೆರೆಯುತ್ತದೆ. ಮೈಲುಮಾಳಿಗೆಗೆ ಹೋಗುವ ದಾರಿ ಒಂದು ಕೊಠಡಿಯ ಮೂಲಕ. ಇದಕ್ಕೆ ಕೆಳಗೊಂದು ಬಾಗಿಲು, ಮೇಲೆ ಮಾಳಿಗೆಗೆ ತೆರೆವ ಮತ್ತೊಂದು ಬಾಗಿಲು. ಮಧ್ಯೆ ಆಳೆತ್ತರಕ್ಕೆ ಒಂದು ಚಾವಡಿ. ಈ ಚಾವಡಿಗೆ ಎರಡು ಕಡೆ ಮೆಟ್ಟಿಲು. ಕತ್ತಲು ಎಂದರೆ ಕತ್ತಲು. ಅಭ್ಯಾಸವಿಲ್ಲದ ಹರೆಯದ ಹುಡುಗಿಯರು ಈ ಕತ್ತಲು ಬಾಗಿಲುಗಳಿಂದ ಪಾರಾಗಿ ಮಾಳಿಗೆಯನ್ನು ಸೇರುವುದಿದೆಯಲ್ಲಾ ಅದು ಅತ್ಯಂತ ವಿನೋದಕರವಾದದ್ದು. ಈ ಕತ್ತಲೆ ಬಲು ತುಂಟ ಕತ್ತಲೆ. ಕಣ್ಣನ್ನು ಎಷ್ಟು ಅರಳಿಸಿದರೂ ಇದು ಕಾಣದು. ದಟ್ಟವಾಗಿದೆ, ಆದರೆ ಎಲ್ಲಿ ಮುಟ್ಟಿದರೆ ಅಲ್ಲಿ ಪೊಳ್ಳು. ಸರ್ವಾಂಗವನ್ನು ವ್ಯಾಪಿಸುವಷ್ಟು ನಯ, ನುಣುಪು. ಆದರೆ, ಅಂಟಿಲ್ಲದೆ ಬಲು ವಿಚಿತ್ರವಾಗಿದೆ. ಈ ಕತ್ತಲು ತುಂಬ ಜನ—ಇದರ ತುಂಬ ಗಜಬಿಜದ ಮಾತು. ಅವಭೃಥದ ದಿನ ಕೊಳದ ತುಂಬ ಜನ ಸ್ನಾನ ಮಾಡುವಾಗ ನೀರು ಕಾಣದೆ

ತಲೆ ಮಾತ್ರ ತೆರೆತೆರೆಯಾಗಿ ಕಾಣುವಂತೆ ಈ ಮಾತು ಆ ಕತ್ತಲಲ್ಲಿ ಕೇಳಿ ಬರುತ್ತದೆ. ಈಜು ಬಾರದಿದ್ದವರು ನೀರಿನಲ್ಲಿ ಮುಳುಗುಹಾಕುವಂತೆ ಅರಿಯದ ಹರೆಯದ ಜನ .ಇದರಲ್ಲಿ ಒಂದು ತೆರದ ಬೆರ್ಚಿನಿಂದ ಮುಳುಗು ಹಾಕಿ ಮುಂದುವರಿಯುತ್ತಾರೆ. ಇಂಥ ಜೀವಂತ ಕತ್ತಲೆಯನ್ನು ನಾನು ಇನ್ನು ಎಲ್ಲೂ ಅನುಭವಿಸಿಲ್ಲ. ಇದನ್ನು ದಾಟಿ ಮೇಲಕ್ಕೆ ಬಂದರೂ ಅಲ್ಲೂ ಕತ್ತಲೆ. ಈ ಕೊಠಡಿಯ ಕತ್ತಲು ಮಾಳಿಗೆಯ ಕತ್ತಲಿನ ತಾಳು. ಅಲ್ಲಿ ಇದು ಕವಲೊಡೆದು ಶಾಖೋಪಶಾಖೆಯಾಗಿ ಬಾನು ತುಂಬ ಹರಡಿ ತಾರೆಗಳ ಹೂ ಬಿಟ್ಟು ವಸಂತದ ಸೌಭಾಗ್ಯವನ್ನು ತೋರುತ್ತಿದೆ ಎಂದು ಯಾರಿಗಾದರೂ ತೋಚೀತು. ಮೇಲಕ್ಕೆ ಬಂದಕ್ಷಣ ದೇವರೆಲ್ಲಿದೆ ಎಂಬುದು ಬರಿಯ ಊಹೆಯ ಮಾತಾಗುತ್ತದೆ. ಮುಂದೆ ಮುಂದೆ ಹೋಗುತ್ತಿರುವವರನ್ನು ನಾವು ಸುಮ್ಮನೆ ಹಿಂಬಾಲಿಸಬೇಕು ಅಷ್ಟೆ. ದಾರಿ ಸುಗಮವಲ್ಲ, ಮಧ್ಯೆ ಮಧ್ಯೆ ನೆಲಮಟ್ಟಕ್ಕಿರುವ ಬೆಳಕಿನ ಕಿಂಡಿಗಳು—ಸಲಾಕಿ ಹಾಕಿದ್ದರೂ, ಜೋಕೆ. ಒಂಟೆಯ ಬೆನ್ನಿನಂತೆ ಅಲ್ಲಲ್ಲಿ ಡುಬ್ಬಗಳು. ಮಾಳಿಗೆಯ ತುಂಬ ಇಂಥ ಏರಿಳಿತಗಳು. ಜಾಗ ತೀರ ಅಪರಿಚಿತ, ಬಹು ವಿಶಾಲ; ಆದುದರಿಂದ ನಾವು ಬೇರೊಂದು ಲೋಕಕ್ಕೆ ಬಂದಿದೇವೆ ಎಂಬ ಭಾವವು ನಮ್ಮನ್ನು ಆವರಿಸುತ್ತದೆ. ಕೊನೆಗೆ ಆವುದೋ ಒಂದು ಮೂಲೆಯಲ್ಲಿ ದೀವಟಿಗೆಯ ಹೊನ್ನು ಬೆಳಕು ಕಂಡಾಗ ಆ ಸುವರ್ಣ ತೇಜೋದರ್ಶನವು ಅತ್ಯಂತ ಮೋಹಕವಾಗುತ್ತದೆ. ದಿಗಂತದ ಕರಿಮುಗಿಲಿನಲ್ಲಿ ಹೊಂಬಣ್ಣದ ಮೂಗು ಮಿಂಚು ಮಿಂಚಿದಾಗಲೆಲ್ಲಾ ನನಗೆ ಈ ವೈಲುಮಾಳಿಗೆಯ ಕತ್ತಲಿನಲ್ಲಿ ಚೆಲುವರಾಯನೊಡನೆ ಓಡಾಡುತ್ತಿರುವ ಪಂಜಿನ ಬೆಳಕು ಜ್ಞಾಪಕಕ್ಕೆ ಬರುತ್ತದೆ. ಅಲ್ಲಿ ಚೆಲುವರಾಯ ವೈಕುಂಠನಾಥನಂತೆ ವೇಷ ತಾಳಿ, ಏಳು ಹೆಡೆಯ ನಾಗರದ ಮೇಲೆ ಲೀಲೆಯಲ್ಲಿ ಪವಡಿಸಿ ಬಹು ಸುಂದರನಾಗಿ ಭಕ್ತರ ಚೂರ್ಣಿಕೆಗಳನ್ನು ಲಾಲಿಸುತ್ತಾ ಅತ್ತ ಇತ್ತ ಸುತ್ತುತ್ತಿರುತ್ತಾನೆ. ನೋಟ ಬಲು ಅಂದ, ಬಲು ಅಂದ. ತನುಸ್ಸಿನಿಂದ ಬೆಳಕಿಗೆ ಈ ಯಾತ್ರೆ —ಭವದಿಂದ ಅಭವನ ದರ್ಶನಕ್ಕೆ.

ಈ ದಿನ ನಾಣುವಿಗೆ ಏನಾಗಿದೆಯೋ ಕಾಣೆ. ಯಾವುದೋ ಒಂದು ಪರಸ್ಥಳದಿಂದ ಬಂದಿರುವ ಇನ್ನೂ ಮದುವೆಯಿಲ್ಲದ ಹುಡುಗಿಯೊಂದನ್ನು ನೋಡಿ ಈತ ತಬ್ಬಿಬ್ಬಾಗಿಬಿಟ್ಟಿದಾನೆ. ಈ ಗುಂಪಿನಲ್ಲಿ ಎಲ್ಲೊ ಆಕೆ ಇರಬಹುದಂತೆ. ಆಕೆ ಮುಡಿದ ಮಲ್ಲಿಗೆಯ ಕಂಪು ಆ ಬಾಗಿಲು ದಾರಿಯ ಕತ್ತಲೆ ಕೈಯಲ್ಲುಳಿದಿದೆಯಂತೆ. ಮೇಲಿನ ಈ ಅಪರಿಚಿತ ವೈಲುಮಾಳಿಗೆ

ಬೃಂದಾವನವಂತೆ, ಕೆಳಗೆ ಇರುವ ದೇವರುಗಳಿಗೆ ಮೇಲೆ ಕಟ್ಟಿರುವ ದುಂಡು ದುಂಡನೆ ವಿಮಾನಗಳು ಈ ಕತ್ತಲಲ್ಲಿ ಲತಾಕುಂಜದ ಸಂಕೇತಸ್ಥಾನಗಳಂತೆ ತೋರುತ್ತವೆಯಂತೆ. ಚೆಲುವರಾಯನೇ ಕೃಷ್ಣನಂತೆ, ನಾವೆಲ್ಲ ಗೋಪ ಗೋಪಿಯರಂತೆ, ಈ ಉತ್ಸವ ಒಂದು ಲೀಲೆಯಂತೆ, ಒಲುಮೆ ಇಂದು ಗಾಳಿ ತುಂಬ ತುಂಬಿದೆಯಂತೆ, ಎಲ್ಲರ ಜೀವವನ್ನೂ ಮೀಟಿ ಸರ್ವವ್ಯಾಪಿಯಾಗುತ್ತಿದೆಯಂತೆ—ಹೀಗೆ ಇವನು ಕವಿತೆಯನ್ನು ಪಠಿಸುತ್ತಿದಾನೆ ನನ್ನ ಕಿವಿಯಲ್ಲಿ. ಅವನು ಕಟ್ಟುವ ಈ ಕಲ್ಪನೆಯಲ್ಲಿ ಶೇಕಡ ಐವತ್ತರಷ್ಟು ನಾನೊಪ್ಪಿಕೊಂಡೆ. ನೀನೂ ಇಪ್ಪತ್ತೈದರಷ್ಟನ್ನಾದರೂ ಒಪ್ಪಿಕೊಳ್ಳುತ್ತಿದ್ದೆ. ಈ ದಿನಕ್ಕೆ ಮರುಳಾಗದವರಿಲ್ಲ.

ಮೊದಲು ದೇವರ ದರ್ಶನ. ಆಲದೆಲೆಯ ಮೇಲೆ ಮಲಗಿರುವ ಹಸುಳೆಯಂತೆ ಎಷ್ಟು ಕಿರಿ ಮುದ್ದನಾಗಿಬಿಟ್ಟಿದಾನೆ ಚೆಲುವರಾಯ. ಅಲಂಕಾರ ಬಲು ಚೆನ್ನ. ಸುಮ್ಮನೆ ನೋಡುತ್ತಾ ನಿಂತುಬಿಡೋಣ ಎನ್ನಿಸುತ್ತದೆ. ದೇವರ ದರ್ಶನವಾದ ಮೇಲೆ, ತಮೋನಿಬಿಡ ತೇಜಃಪುಂಜ ಆಕಾಶದ ಕೆಳಗೆ, ಭೂಮಿಗಿಂತ ಎತ್ತರದ ಮೇಲು ಬಯಲಿನಲ್ಲಿ, ಸ್ವರ್ಗೋಪಮವಾದ ದಿವ್ಯ ಸಾನ್ನಿಧ್ಯದಲ್ಲಿ ಚೂರ್ಣಿಕೆಗಳನ್ನು ಸೇವಿಸುತ್ತಾ ದೇವರಿದಿರು ಬರುವ ವೈದಿಕ ಆಚಾರ್ಯ ಪುರುಷರು ನಮ್ಮ ಗಮನಕ್ಕೆ ಬೀಳುತ್ತಾರೆ. ಉತ್ಸವ ನಡೆಯುವಾಗ ಶ್ಲೋಕ, ಮೂಲೆ ತಿರುಗಿ ನಿಂತಾಗ ಚೂರ್ಣಿಕೆ, ಹೀಗೆ ಹಲವು ಬಾರಿ ಉತ್ಸವ ನಡೆಯುತ್ತದೆ. ಬಳ್ಳಿಯಲ್ಲಿ ಬೇಲಿಯಲ್ಲಿ ಬಗೆಬಗೆಯ ಬಣ್ಣದ ಹೂಗಳು ನಾನು ತಾನೆಂದು ಬೆಳಕಿಗೆ ಹಾತೊರೆದು ಬರುವ ಬೆಡಗನ್ನು ನೀನು ನೋಡಿರಬಹುದು. ಹಾಗೆಯೇ ನೋಡು, ಎದುರು ಸಾಲಿನಲ್ಲಿ ನಡು ವಯಸ್ಸಿನವರೂ ವೃದ್ಧರೂ ಆದ ಪುರಂಧ್ರಿಯರ ನಡುವೆ ಕಿಕ್ಕಿರಿದು ಸಂದಿ ಸಂದಿಯಲ್ಲಿ ಕಣ್ಣುಗಳನ್ನು ಅರಳಿಸಿ, ನಗೆಮಲ್ಲಿಗೆ ತೋರಿ, ಓಲೆ ಮೂಗುತಿಗಳನ್ನು ಬೆಳಗಿಸುತ್ತಾ, ಲತೆಕೈಗಳನ್ನಾಡಿಸುತ್ತಾ, ತುಟಿದಳಗಳನ್ನು ತೆರೆದು ನಗೆಮಾತಿನ ಕಂಪನ್ನು ಹರಡುತ್ತಾ ಎಳೆವಯಸ್ಸಿನ ಮುಗ್ಧೆಯರು ಮುಂದೆ ಬಾರದೆ ಹಿಂದೆ ಇರಲಾರದೆ ಅಂದವಾಗಿದಾರೆ. ನೋಟ ಚಂದ-ಕಾಮವ್ಯಾಮೋಹ ಹುಟ್ಟಿಸುವಂಥದಲ್ಲ. ಈ ನೋಟದಲ್ಲಿ ಬರಿ ಕೌತುಕ ಕುತೂಹಲ; ಇತರರ ಸಂತೋಷದಲ್ಲಿ ಸಂತೋಷ ಅಷ್ಟೆ. ಈ ನೋಟವಾದ ಮೇಲೆ ಉತ್ಸವದ ಮುಗಿವನ್ನು ತೋರುವ ರಾಮಬಾಣದ ಲೀಲೆ; ಹುಡುಗರಿಗೆ ಇದು ಮುಖ್ಯ. ಹಗ್ಗದಮೇಲೆ ಈ ಬಾಣ ಕಿಡಿಗರೆಯುತ್ತಾ ಹರಿಯುವುದು ಚೆನ್ನ. ಮೊದಲಿನದು ರಾಕ್ಷಸನದು, ದೇವರ ಮೇಲೆ. ಎದುರುಬರುವುದು ದೇವರದು, ರಾಕ್ಷಸಾಂತಕವಾದುದು.

ಸಿಪಾಯಿಯ ಬಂದೂಕ ಜೇರೆ ಈಗ ಆಕಾಶಕ್ಕೆ ಹಾರುತ್ತದೆ. ಇನ್ನು ಕೆಳಕ್ಕೆ ಹೊರಡುತ್ತದೆ ಉತ್ಸವ.

ಈ ಕೆಳಕ್ಕೆ ಬಂದು ಗರ್ಭ ಗುಡಿಯನ್ನು ಚೆಲುವರಾಯ ಸೇರುವ ನಡೆಗೆಯ ಸೊಗಸೇ ಸೊಗಸು. ಈ ಉತ್ಸವ ಒಂದು ತೆರದ ನರ್ತನ. ಶತ್ರುವನ್ನು ಜಯಿಸಿದ ಮೇಲೆ ಜೇತಾರನಿಗೆ ಬರುವ ಪ್ರಮೋದದ ಮತ್ತನ್ನು ತೋರುವುದು ಇದರ ಉದ್ದೇಶ. ನನಗೆ ಎನ್ನಿಸುತ್ತದೆ ಎಲ್ಲಾ ಆನಂದಕ್ಕಿಂತ ವಿಜಯದ ಆನಂದ ಪ್ರಕೃಷ್ಟವೆಂದು. ಈ ಆತ್ಮದೀಪ್ತಿಯಲ್ಲಿ ಕಾವೂ ಬೆಳಕೂ ಎಲ್ಲಕ್ಕಿಂತ ಹೆಚ್ಚು. ಅದಕ್ಕೆಯೇ ಸರ್ವಕಾಲದಲ್ಲಿಯೂ ಯುದ್ಧಪ್ರೀತಿ ಜನ ಜನಾಂಗಕ್ಕೆ. ಸತ್ತವರ ಬಾಳುವೆ ಇದ್ದವರಿಗೆ ಹರಿದು ಬಂದು ಜೀವನ ಹೊರವಾಗುತ್ತದೆಯೋ ಏನೊ. ನಟರಾಜನ ಕಾಲಿನ ಕೆಳಗೆ ಬಿದ್ದಿರುವ ರಾಕ್ಷಸನನ್ನು ನೆನೆ. ಆ ರುದ್ರನಟನ ಉನ್ಮತ್ತ ನರ್ತನದ ಪ್ರೇರಕನಲ್ಲವೇ ಆ ಬಿದ್ದ ಬಡವ. ಆತನಿಂದಲೇ ಶಿವನಿಗೆ ಆನಂದ ಚಿಮ್ಮಿತೆನ್ನುವಂತೆ ತೋರುತ್ತದೆ. ಆನಂದ ಮಾತ್ರಕೆ ಹಗೆಯ ಸೋಲು. ಹಾಗೆಯೇ ನಮ್ಮ ಚೆಲುವರಾಯನಿಗೂ ಈ ದಿನ ವಿಜಯದ ಆನಂದದ ಮತ್ತಿನ ಗತ್ತು.

ಈ ಉತ್ಸವ ವೈಲುಮಾಳಿಗೆಯ ದಾರಿಯ ಕೊಠಡಿಯ ಜಗಲಿಯಿಂದ ಪ್ರಾರಂಭವಾಗುತ್ತದೆ. ಈ ಜಗಲಿಯ ಮೇಲೆ ಚೆಲುವರಾಯ ಉಪಹಾರ ಸ್ವೀಕರಿಸಿ ತಾಂಬೂಲವನ್ನು ಮೆಲ್ಲುತ್ತಾ, ಸ್ಥಾನೀಕರು ಹಿಡಿದ ಕೈಗನ್ನಡಿಯಲ್ಲಿ ತನ್ನಂದವನ್ನು ನೋಡಿಕೊಳ್ಳುತ್ತಾ, ಕಿರೀಟದಂತಿರುವ ಜರತಾರಿಯ ಟೋಪಿಯನ್ನಿಟ್ಟುಕೊಂಡು ತಾಳಹಿಡಿದು ಹಾಡುವ ಅರೆಯರ ಗೀತವನ್ನೂ, ಮೃದಂಗ ಧ್ವನಿಯನ್ನೂ ಲಾಲಿಸುತ್ತಾ ಸ್ವಲ್ಪ ಹೊತ್ತು ಕುಳಿತು ಮೆಲ್ಲನೆ ಕೆಳಗಿಳಿಯುತ್ತಾನೆ. ಕೆಳಕ್ಕೆ ಬಂದಮೇಲೆ ಒಂದು ರೀತಿಯಲ್ಲಿ ನೆಲದಮೇಲೆ ನಡೆದು ಬರುವಂತೆಯೇ ಆಂದೋಳಿಕಾಗತಿಯಲ್ಲಿ ತುಸ ದೂರ ಬರುತ್ತಾನೆ. ಆಮೇಲೆ ಬಲಕ್ಕೆ ತಿರುಗಿ ಸರಕ್ಕನೆ ಮೇಲಿನ ಪ್ರಾಕಾರದಿಂದ ಕೆಳಗಣ ಪ್ರದಕ್ಷಿಣೆಯ ಅಂಗಳಕ್ಕೆ ಇಳಿಯುವ ಮೆಟ್ಟಲಿನ ಹತ್ತಿರಕ್ಕೆ ಓಡಿಬರುತ್ತಾನೆ. ಅಲ್ಲಿ ತಟಕ್ಕನೆ ನಿಲ್ಲುತ್ತಾನೆ. ನಿಂತು ಮೆಲ್ಲನೆ ಬಹು ಸೊಗಸಿನಿಂದ ಮೆಟ್ಟಲುಗಳನ್ನು ಒಂದೊಂದಾಗಿ ಇಳಿಯುತ್ತಾನೆ. ಈ ಮೆಟ್ಟಲು ಇಳಿತ ಏರುವಿಕೆಗಳು ಉತ್ಸವ ನಡೆಸುವವರಿಗೆ ಬಹು ಕಸರತ್ತಿನ ಕೆಲಸ. ಪೀಠ ನೆಲವನ್ನು ಸೋಕುವಂತೆ ಇದ್ದರೂ ಸೋಕದ ಹಾಗೆ ತೋಳಿನಲ್ಲಿ ಎತ್ತಿ ಹಿಡಿದು, ನಿಂತೂ ಕುಳಿತೂ ಮಲಗಿಕೊಂಡೂ ಸಹ ದೇವರನ್ನು ಬಿಜಯಮಾಡಿಸಬೇಕು. ಹೀಗೆ ಇಳಿದು ಪುನಃ ಬಲಕ್ಕೆ ತಿರುಗಿಕೊಂಡು ಹತ್ತಿರವಿರುವ ಪ್ರಾಕಾರದ

ಮೆಟ್ಟಿಲು ಬಳಿಗೆ ಧಾವಿಸುತ್ತಾನೆ ಚೆಲುವರಾಯ. ಆ ಮೆಟ್ಟಿಲನ್ನು ಮೆಲ್ಲನೇರಿ ಮೇಲೆ ತನ್ನಿದಿರಿಗಿರುವ ತಿರುಕ್ಕುಚ್ಚಿನಂಬಿಯವರೆದುರಿಗೆ ಓಡಿಬರುತ್ತಾನೆ. ಆ ಬಳಿ ಸ್ವಲ್ಪ ನಿಂತು ಪೂಜೆಗೊಂಡು ಆ ಪ್ರಾಕಾರದ ಉದ್ದಕ್ಕೂ ಅರೆಯರ ತಾಳ ಝಣಝಣಗುಟ್ಟುತ್ತಿರಲು, ಮೃದಂಗದವ ಧೀಂಕಿಡುತ್ತಿರಲು, ದೀವಟಿಗೆ ಯವರ ದೀವಟಿಗೆ ಕುಣಿಯುತ್ತಿರಲು, ಜನ ಹೋ ಹೋ ಎಂದಾರುತ್ತಿರಲು ಓಡುತ್ತಾನೆ. ಓಡುತ್ತಲೇ ಮೂಲೆ ತಿರುಗುತ್ತಾನೆ. ಕೆಳ ಅಂಗಳಕ್ಕೆ ಇಳಿ ಯುವ ಮೆಟ್ಟಿಲು ಬಳಿ ತಟಕ್ಕನೆ ನಿಲ್ಲುತ್ತಾನೆ. ನೋಡಬೇಕು ಈ ವೈಖರಿ ಯನ್ನು. ಯಥಾಪ್ರಕಾರ ಒಂದೊಂದಾಗಿ ಈ ಮೆಟ್ಟಿಲುಗಳನ್ನು ಮೆಲ್ಲನಿಳಿದು ಈಗ ಹೆಗಲನ್ನೇರಿ, ದಾಬುಗಾಲೋಟದಲ್ಲಿ ಅತ್ಯಂತ ವಿಸ್ಮಯಜನಕವಾದ ರೀತಿಯಲ್ಲಿ ನಡೆಯುತ್ತಾ, ಭುಜಗಳನ್ನು ಕುಣಿಸುತ್ತಾ, ಕುಣಿಯುತ್ತಾ ಕುಪ್ಪಳಿಸುತ್ತಾ, ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಈ ಅಂಗಳ ದಾಟಿ ಗುಡಿ ಯೊಳಕ್ಕೆ ಹೊಕ್ಕು, ರಾಮಾನುಜರ ಸನ್ನಿಧಿಯ ಬಳಿ ಸ್ವಲ್ಪ ನಿಂತು ಮಂಗ ಳಾರತಿ ಸ್ವೀಕರಿಸಿ, ಪುನಃ ಅದೇ ನಡಗೆಯಲ್ಲಿ ನಡೆದು ತನ್ನ ಒಳಗುಡಿಗೆ ಹೋಗಿ ಸೇರಿ ಧಡಮ್ಮನೆ ಬಾಗಿಲು ಹಾಕಿಕೊಳ್ಳುತ್ತಾನೆ. ಛತ್ರಿ ಚಾಮರ ವೆಲ್ಲಾ ಹೊರಗೆ ನಿಲ್ಲುತ್ತದೆ. ಜನದ ಕೋಲಾಹಲ ಹೊನ್ನು ಹರಿಯುತ್ತ ಕಲ್ಲೋಲವಾಗುತ್ತದೆ. ಇದು ನಿಜವಾಗಿ ವಿಜಯೋನ್ಮಾದದ ಲೀಲೆ. ಈ ಉತ್ಸವವನ್ನು ಬಿಜಯ ಮಾಡಿಸುವವರು ಬಲಶಾಲಿಗಳು, ನುರಿತವರು, ನಡೆಬಲ್ಲವರು. ಛತ್ರಿ ಚಾಮರ ಕುಂಚ ಪಂಜುಗಳನ್ನು ಹಿಡಿದಿರುವವರಿಗೂ, ದೇವರ ಎದುರಿನಲ್ಲಿ ಕೈಗನ್ನಡಿ ಹಿಡಿದಿರುವವರಿಗೂ ಶ್ರಮ ಹೆಚ್ಚು. ಈ ಕನ್ನಡಿಯವರೂ ಅರೆಯರೂ ಮೃದಂಗದವನೂ ಹಿಂದೆ ಹಿಂದಕ್ಕೆ ಹೆಜ್ಜೆಯಿಟ್ಟು ಓಡಬೇಕಾಗಿರುವುದರಿಂದ ಇವರು ಹೆಚ್ಚು ಎಚ್ಚರದಿಂದಿರಬೇಕು. ಈ ಅರೆ ಯರ ವೇಷವೂ, ಹಾಡೂ, ತಾಳವೂ, ಓಟವೂ ಬಹಳ ವಿನೋದಕರವಾಗಿವೆ; ಉತ್ಸವಕ್ಕೆ ವಿಲಕ್ಷಣ ಕಳೆಯನ್ನೂ ಘನತೆಯನ್ನೂ ಕೊಡುತ್ತವೆ. ಇಷ್ಟು ಬಗೆಯ ನಡೆಯೂ ಓಟವೂ, ಅಸಾಧ್ಯ ಜನಸಂದಣಿಯಲ್ಲಿ ಜರುಗಬೇಕು. ಮಣಿಯಗಾರರ 'ದಾರಿ ದಾರಿ, ಎಚ್ಚರಿಕೆ ಎಚ್ಚರಿಕೆ', ಎಂಬ ಕೂಗೂ ಅಂದವೇ ಸರಿ.

ಎಲ್ಲರಿಗೂ ಒಂದು ತೆರೆದ ಹುಚ್ಚಿನ ಆನಂದ; ಗೆಲವನ್ನು ಪಡೆದವ ಚೆಲುವ ರಾಯ, ಆತನ ಪಡೆ ನಾವು, ನೋಟಕರಲ್ಲ ಪಾತ್ರಗಳು ನಾವು. ಇದು ಲೀಲೆಯಾದರೆ ನಲಿವವರು ನಾವು. ನಾಟಕವಾದರೆ ವೇಷಧಾರಿಗಳು ನಾವು. ನಮಗುಂಟಾಗುವ ಆನಂದ ಮತ್ತೊಬ್ಬರ ನಟನದಿಂದಾಗುವ ಅನುರಣನ

ವಲ್ಲ; ಸ್ವಯಂ ಅನುಭವ ಸಿದ್ಧವಾಗುವ ಆನಂದ. ಹೀಗೆ ಆಬಾಲವೃದ್ಧರಿಗೂ ಪಂಡಿತ ಪಾಮರರಿಗೂ ಹಿಗ್ಗಾಗುವಂತೆ ಈ ಅಂದವಾದ ಉತ್ಸವವನ್ನು ಕಲ್ಪಿಸಿದವರ ಕಲಾವಂತಿಕೆಯನ್ನು ಎಷ್ಟು ಹೊಗಳಿದರೂ ಸ್ವಲ್ಪವೇ. ಇಂಥ ಸಂದರ್ಭಗಳಲ್ಲಿ ಪ್ರಕೃತಿಬದ್ಧ ಜೀವಾತ್ಮವು ಮುಕ್ತವಾಗಿ ಒಂದಕ್ಕೊಂದಕ್ಕೆ ಬೆರೆದುಕೊಂಡು ಹೋಗಿ ವಿಶ್ವಾತ್ಮವಾಗುತ್ತದೆಯೊ ಏನೊ. ನೆರೆ ಬಂದಾಗ ಕೊಳ ಬಾವಿ ನೀರೆಲ್ಲಾ ಒಂದಾಗಿ ಹರಿದು. ನೆರೆನಿಂತಮೇಲೆ ತಿರುಗಿ ಕೊಳ ಬಾವಿಕಟ್ಟೆಯಾದರೂ ಕಲ್ಮಷ ನೀಗಿ ಹೊಸ ನೀರು ತುಂಬಿ ನಿರ್ಮಲವಾಗುವಂತೆ ನಾವೆಲ್ಲ ಈ ಆನಂದದ ನೆರೆಯಲ್ಲಿ ಒಂದಾಗಿ ಹರಿದೆವು. ಹಿಗ್ಗು ಇಳಿದು ನಾವು ನಾವಾಗುಳಿದ ಮೇಲೂ ಮನಸ್ಸು ಹಗುರವಾಗಿ ಒಂದು ತೆರದ ನಿರ್ಮಲೋಲ್ಲಾಸ ನಮ್ಮ ಬಾಳನ್ನು ತುಂಬಿದಂತಾಗಿದೆ. ಎಷ್ಟು ಜನ! ಇಷ್ಟು ಜನಕ್ಕೂ ಸಂಸಾರದಲ್ಲಿ ಎಷ್ಟು ಖೇದ ಮೋದಗಳಿರಬಹುದು. ಆದರೆ ಈ ದಿವ್ಯಾನಂದಲೀಲೆಯಲ್ಲಿ ಭವವೆಲ್ಲಾ ಕೊಚ್ಚಿಹೋಗಿ ನಾವೂ ತುಸ ಕಾಲ ದೇವಭಾವವನ್ನು ಪಡೆಯುತ್ತೇವೆ. ಈ ಅನುಭವ ಕಲೆಯಿಂದ ಸಿದ್ಧಿಸುವುದೇ ಎಂಬ ವಿಚಾರದಲ್ಲಿ ನನಗೆ ಸಂದೇಹ. ಏಕೆಂದರೆ ಈ ತೆರದ ಆನಂದದ ವೈತುಂಬು ಉದಯಶಂಕರನ ನೃತ್ಯವನ್ನು ನೋಡಿದಾಗಲೂ ನನಗೆ ಬರಲಿಲ್ಲ. ಗುಡಿ ದೇವರು ಉತ್ಸವಾದಿಗಳಿಂದ ನಾವು ಪಡೆಯುವ ಅನುಭವ ತೀರ ವಿಚಿತ್ರ. ಗುಡಿ ಮಾನವನ ಬಾಳಿನ ಕೆರೆಗೆ ತೂಬಿದ್ದ ಹಾಗೆ. ಸಂದಿ ಇಕ್ಕಟ್ಟು, ಆದರೆ ಕೆರೆಯ ನೀರಿನ ಸೆಳೆತವೆಲ್ಲಾ ಆ ರಂಧ್ರದ ಕಡೆಗೇ ಅಲ್ಲವೆ. ಹಾಗೆ ಗುಡಿ ಭವಮುಕ್ತಿಯ ಆಸೆಯನ್ನು ತೋರಿ ಜನತೆಯನ್ನು ತನ್ನೆಡೆಗೆ ಸೆಳೆಯುತ್ತದೆ.

ಇನ್ನೂ ಏನೇನೋ ಭಾವನೆಗಳು ಮನಸ್ಸಿನಲ್ಲಿ ಮೂಡಿ ಬರುತ್ತಿವೆ. ಅವನ್ನೆಲ್ಲ ಹೇಳಿ ಒಂದು ಕಾಗದದಲ್ಲಿ ಮುಗಿಸುವ ಹಾಗಿಲ್ಲ. ನಿನಗೂ ಬೇಸರವಾಗಬಹುದು. ನೀನು ಬರಲಿಲ್ಲವಲ್ಲಾ ಎಂದು ನಾಣುಗೆ ಒಂದು ತೆರದ ಕೊರತೆ. ನನಗೂ ಏನೋ ಒಂದು ತೆರದ ಅರಕೆ. ಅಷ್ಟು ದೂರದಲ್ಲಿದ್ದರೂ ನಿನ್ನ ಹಿಂಸೆ ನನಗೆ ತಪ್ಪಲಿಲ್ಲ. ಮೋಹ ಕೆಟ್ಟದ್ದು. ಮೋಹದ ಮಾತು ಬಂದಿತಲ್ಲಾ.—ನಾಣು ಮನೆಗೆ ಮರಳುವಾಗ ಆ ಜನಜಂಗುಳಿಯ ಗಲಭೆಯ ನಡುವೆ ಆ ಹುಡುಗಿಯನ್ನು ತೋರಿಸಿದ. ಚಂದವಷ್ಟರಲ್ಲೆ ಇದೆ.—ಈ ದಿನದ ಮಹತ್ವ ಹಾಗೆ. ರಾತ್ರಿ ಬಹಳ ಹೊತ್ತಾಗಿದೆ; ಕಾವಿನಲ್ಲೆ ಬರೆಯಬೇಕೆಂದು ಕುಳಿತು ಬರೆದೆ. ಇಷ್ಟಕ್ಕೆ ಮುಗಿಯಿತಲ್ಲಾ, ನಿನ್ನ ಪುಣ್ಯ. ನಾನು ಇಲ್ಲಿರುವಾಗಲೇ ನೀನೂ ಬೇಗ ಇಲ್ಲಿಗೆ ಬಂದುಬಿಡು. ನಾಣು ಇನ್ನೂ ಏನೇನೋ ಉತ್ಸವಗಳನ್ನೂ ಪೊಂಗಲು ಪುಳಿಯೋಗರೆಗಳನ್ನೂ

ಬಣ್ಣಿಸಿ ನೀರೂರಿಸುತ್ತಿದ್ದಾನೆ. ಇಂಥ ಜನ, ಇಂಥ ಗುಡಿ, ಇಂಥ ಚೆಲುವರಾಯ, ಇಂಥ ಉತ್ಸವಗಳು, ಬೇರೆ ಎಲ್ಲೂ ಇಲ್ಲ. ನೆವ ಹೇಳಿ ನಿಲ್ಲದೆ ಬೇಗ ಬಾ.

# ಮಳೆ

ಯದುಗಿರಿಯಲ್ಲಿ ಮಳೆ ಬಾರದೆ ಹಾಹಾಕಾರವೆದ್ದಿದೆ. ಜಾತ್ರೆಯು ಕಶ್ಮಲ ತೊಳೆದು ಹೋಗಿಲ್ಲ. ಕೊಳಗಳೆಲ್ಲಾ ಬತ್ತಿಹೋಗಿವೆ. ಸೀನೀರಿನ ಕೊಳದಲ್ಲಿ ತೇವ ಮಾತ್ರ ಅಡಿಬಂಡೆಗಳ ಸಂದುಗಳಲ್ಲಿ ಪಾಚಿಗೆ ತುಸು ಅಂಟಿಕೊಂಡಿದೆಯೇ ಹೊರತು ಸ್ವಾದೂದಕವಿಲ್ಲ. ಊರಿನ ಐನೂರು ಬಾವಿಗಳಲ್ಲಿ ಕೇವಲ ಹತ್ತು ಬಾವಿಗಳಲ್ಲಿ ಒಂದು ನೂರು ಕೊಡ ಸಿಕ್ಕಬಹುದು. ಕೆರೆಯಲ್ಲಿ ಸ್ನಾನಕ್ಕೆಷ್ಟಕ್ಕೋ ಅಷ್ಟಕ್ಕೇ ಅನುಕೂಲ. ಶ್ಮಶಾನದ ಹತ್ತಿರವಿರುವ ಒಂಭತ್ತು ಕಲ್ಲಿನ ಬಾವಿಯಿಂದ ನೀರು ಹೊರುವ ಸಂಭವ ಇಂದೋ ನಾಳೆಯೋ ಒದಗಬಹುದು. ಊರಿನಲ್ಲೆಲ್ಲಾ ಉಪದ್ರವಗಳು. ಬೇಸಗೆಯ ಬಿಸಲಿನ ಝಳ ವಿಪರೀತ. ಮಳೆರಾಯ ಮುಳಿದು ನಿಂತುಬಿಟ್ಟಿದ್ದಾನೆ. ಸೀಮೆಯೆಲ್ಲಾ ಸುಳಿದಾಡುತ್ತಿದ್ದರೂ ಇತ್ತ ಕಡೆ ಸುಳಿಯುವೊಲ್ಲ. ಮುಳಿಸಿನ ಕಾರಣ ಗೊತ್ತಿಲ್ಲ. ಇದನ್ನಿಳಿಸುವುದಕ್ಕೆ ಯಾವ ದೇವರು ಶಕ್ತನೋ ಕಾಣೆ. ತಾರಕ ದೇವರು ನಮ್ಮ ಬೆಟ್ಟದ ನರಸಿಂಹ. ಆತನಿಗೆ ಸಹಸ್ರ ಕುಂಭಾಭಿಷೇಕ ಮಾಡಿದರೆ ಈ ತಂಪಿನಿಂದ ಆತ ಎಚ್ಚತ್ತು ಏನಾದರೂ ಉಪಕಾರಮಾಡಿಯಾನು. ಸರಿ, ಊರಿನ ಹಾರುವರೆಲ್ಲಾ ತಾಮ್ರದ ಕೊಡಗಳನ್ನು ಹೊಳಪಾಗಿ ಬೆಳಗಿಕೊಂಡು ಊರಿಗೆ ಎರಡು ಮೈಲಿ ದೂರದಲ್ಲಿರುವ ಒಂಭತ್ತು ಕಲ್ಲಿನ ಬಾವಿಯ ಚಿಲುಮೆಯಿಂದ ಸೀನೀರು ತುಂಬಿಕೊಂಡು ತಮಗೆ ಬಂದ ಸ್ತೋತ್ರಗಳನ್ನು ಹೇಳುತ್ತಾ ಬೆಟ್ಟಕ್ಕೆ ನೀರು ಹೊರುತ್ತಿದ್ದಾರೆ.

ವಿಪ್ರರ ಈ ಕಾರ್ಯ "ವಿಜ್ಞಾನಿ"ಗಳಿಗೆ ಅಜ್ಞಾನವೆಂದು ತೋರಬಹುದು. ವಿಚಿತ್ರವಾದ ಈ ಆಧುನಿಕ ಯುಗದಲ್ಲಿ ಯಾವ ಕಾರಣದಿಂದ ಯಾವ ಫಲಪ್ರಾಪ್ತಿಯಾಗುತ್ತದೆ ಎಂದು ಯಾರಾದರೂ ತರ್ಕದಿಂದ ಹೇಳಲಾಗುತ್ತದೆಯೋ? "ನಿಮ್ಮ ಸಿಪಾಯಿ ಜೋಡನ್ನು ಸರಿಯಾಗಿ ಹಾಕಿಕೊಂಡಿಲ್ಲ"—ಇಂಥ ಅನೇಕ ಅಸಂಬದ್ಧ ದೂರುಗಳಿಗೂ ನನ್ನಾಕೆ ಬಯಸುವ ಸೀರೆಗೂ ಕಾರ್ಯಕಾರಣ ಭಾವವನ್ನು ಕಲ್ಪಿಸಬಲ್ಲಿರಾ? ಆದರೆ ಒಂದು ನಡೆಯದೆ ಮತ್ತೊಂದು ಆಗುವಹಾಗಿಲ್ಲ. ಇಂಥ ನೂರು ದೂರುಗಳನ್ನು ತರುವವರು ತಂದು ಅವನ್ನು ನಾನು ಯಂತ್ರದ ಮೇಲೆ ಕೊಟಕೊಟ ಕುಟ್ಟಿದರೆ ಆಗ ನೆಯ್ಗೆಯವನ ನೆಯ್ಗೆಯಿಂದ ಮೇಲಕ್ಕೆದ್ದು ಶೆಟ್ಟಿ ಅಂಗಡಿಯ ಬೀರುವನ್ನು ತೆರೆದುಕೊಂಡು ಸೀರೆ ಮನೆಗೆ ನಡೆದು ಬರುತ್ತದೆ. ಈ ಕೊಟಕೊಟ ನಿಂತರೆ ಸೀರೆಯ ಕಾಲು ಮುರಿಯುತ್ತದೆ.

ಹೆಂಡತಿ ನಗುವುದರ ಬದಲು ಗೊಣಗುಟ್ಟುವುದಕ್ಕೆ ಮೊದಲಿಡುತ್ತಾಳೆ. ಹೀಗೆ ಸಿಪಾಯಿ ಕಾಲಿಗೆ ಜೋಡು ಸರಿಯಾಗಿ ಹಾಕಿಕೊಳ್ಳದೇ ಇರುವುದಕ್ಕೂ ನಮ್ಮ ಮನೆಯಾಕೆಯ ಹೊಸ ಸೀರೆಯುಡುವ ನಲಿವಿನ ನಗೆಗೂ ಇಂಥ ಕಾರ್ಯಕಾರಣ ಭಾವವಿದ್ದರೆ, ಬೆಟ್ಟಕ್ಕೆ ನೀರು ಹೊತ್ತು ನರಸಿಂಹ ದೇವರಿಗೆ ಅಭಿಷೇಕ ಮಾಡುವುದಕ್ಕೂ ಮುಗಿಲಿಂದ ಮಳೆ ಸುರಿಯುವುದಕ್ಕೂ ಹೆಚ್ಚು ನಿಕಟ ಸಂಬಂಧವಿಲ್ಲ ಎಂದು ಹೇಳುವುದಕ್ಕಾಗುತ್ತದೆಯೇ? ನಮ್ಮ ಆಧುನಿಕ ಜೀವನ ವಿಜ್ಞಾನವನ್ನು ನೋಡಿ ಹಿರಿಯರು ಪಶ್ಚಾತ್ತಾಪಪಡುತ್ತಾರೆ. ಅವರ ಅಜ್ಞಾನಕ್ಕೆ ನಾವು ಇಲ್ಲಿ ವಿಷಾದಿಸುತ್ತೇವೆ.—ಇಲ್ಲ ನಗುತ್ತೇವೆ. ಆದರೆ ನಾನು ವಿಷಾದಿಸಲೂ ಇಲ್ಲ, ನಗಲೂ ಇಲ್ಲ. ಹೂಂ, ಆದದ್ದು ಆಗಲಿ, ನನಗೂ ಒಂದು ಕೊಡ ಕೊಡಿ ಎಂದೆ. ಅಭ್ಯಾಸವಿಲ್ಲ, ಝಳ ಹೆಚ್ಚು. ಆದರೆ ಹತ್ತು ಜನ ಒಂದು ರೀತಿಯಲ್ಲಿ ನಡೆಯುವಾಗ ಒಬ್ಬ ಎಂತು ಹಿಂದುಳಿಯುವುದು. ನಿಜವಾಗಿ ಊರು ಬಹಳ ಕಷ್ಟಪಡುತ್ತಿತ್ತು. ನಾನೂ ಈಗ ಸ್ವಲ್ಪ ಶ್ರಮವಹಿಸಿದರೆ ಮುಂದೆ ಮಂಗಳವಾದಾಗ ನನಗೂ ಮನಶ್ಶಾಂತಿ ದೊರೆಯಬಹುದೆಂದುಕೊಂಡು ಕೊಡವನ್ನು ಹೆಗಲ ಮೇಲೆ ಹಾಕಿಕೊಂಡು ಹೊರಟೆ.

ನಾವು ಇದಕ್ಕೆ ನಗೋಣವೇ, ಅಳೋಣವೇ? ಮಳೆಯಿಲ್ಲದೆ ಬಾಳುವೆ ನಡೆಯುವಂತಿಲ್ಲ. ನಮ್ಮ ದೇಹದಲ್ಲಿ ೭೫% ಭಾಗ ನೀರಂತೆ. ಆದರೆ ಮಳೆ ನಮ್ಮಧೀನವಲ್ಲಿಲ್ಲ. ಅದರ ಹಂಗು ನಮಗೆ ಬಹಳ; ನಮ್ಮ ಹಂಗು ಅದಕ್ಕೆ ತುಸವೂ ಇಲ್ಲ. ನಮ್ಮ ಹಂಗಿಗೆ ಅದನ್ನು ಒಳಪಡಿಸಿಕೊಳ್ಳುವಷ್ಟು 'ವಿಜ್ಞಾನ' ನಮಗಿನ್ನೂ ದೊರೆತಿಲ್ಲ. ಪ್ರಪಂಚಕ್ಕೆಲ್ಲಾ ಹೇಗೋ ಹಾಗೆಯೇ ಮಳೆಗೂ ಮೂಲಭೂತವಾದ ಕಾರಣ ಅವಿದ್ಯೆ. ಅವಿದ್ಯೆಯನ್ನು ವಿದ್ಯೆಯಿಂದ ವಶಪಡಿಸಿಕೊಳ್ಳಬಹುದೆಂದು ಕೆಲವರು ಹೇಳುತ್ತಾರೆ. ಆದರೆ ಅದು ಶುದ್ಧ ಸಾತ್ತ್ವಿಕರ ಮತ. ಶಠಂ ಪ್ರತಿ ಶಾಠ್ಯಂ. ಅವಿದ್ಯೆಗೆ ಅಜ್ಞಾನ ತಕ್ಕ ಮದ್ದು. ಬರಬೇಕಾದ ಮಳೆ ಯಾಕೆ ಬರಲಿಲ್ಲ? ಬರದಿದ್ದರೆ ಸುಮ್ಮನೆ ಬಿಟ್ಟೇವೆ ನಾವು? ಬೆಟ್ಟಕ್ಕೆ ನೀರು ಹೊತ್ತು ಸುರಿದು ಬರಿಸುತ್ತೇವೆ. ಈ ಅಭಿಷೇಕ ಕಾರ್ಯದಲ್ಲಿ ನಮ್ಮ ಚತುರೋಪಾಯವೂ ಅಡಗಿದೆ. ನೀನೂ ಹೀಗೆ ಸುರಿಯಪ್ಪಾ ಎಂದು ಸಾಮದ ಅನುಕರಣ ಗೌರವದಿಂದ ಪ್ರಚೋದನೆ; ನೀನು ಸಿರಿವಂತ, ಆದರೂ ಬಡವರು ಅಷ್ಟು ದೂರದಿಂದ ಹೊತ್ತು ತಂದು ಸುರಿಯುವ ಈ ಅರ್ಘ್ಯರೂಪವಾದ ಅಲ್ಪ ದ್ರವ್ಯವನ್ನು ಸೂರ್ಯಾತಪಮುಖೇನ ಸ್ವೀಕರಿಸಿ ಪ್ರಸನ್ನನಾಗು ಎಂದು ದಾನ; ಆ ಕರಿಕಲ್ಲಿನ ಬೋಳುಗುಡ್ಡದಲ್ಲಿ ನಿನ್ನನ್ನು ನೆನೆಯುವವರು ತಾನೆ ಯಾರಿದಾರೆ, ನಿನಗಾಗಿ ಹೂವಿನ ಅರ್ಘ್ಯವನ್ನೆತ್ತುವ

ಒಂದು ಮರ ಕೂಡ ಅಲ್ಲಿ ಇಲ್ಲವಲ್ಲ, ಅಲ್ಲೇಕೆ ನಿನ್ನ ಸಿರಿಯನ್ನೆಲ್ಲಾ ಸುರಿದು ಬಡವನಾಗುತ್ತೀಯಾ, ನಮ್ಮೆಡೆ ಬಾ. ಈ ಪೂಜೆ ನಿನಗೆ ಎಂದು ಭೇದ; ನೀನು ಬಾರೆಯಾ, ಹಾಗೆಯೇ ನಮ್ಮ ನರಸಿಂಹನ ಕೈಯಲ್ಲಿ ಮೋಡಿ ಹಾಕಿಸಿ ನಿನ್ನನ್ನು ಮಂತ್ರದಿಂದ ಸೆಳೆಯುತ್ತೇವೆ ಎಂದು ದಂಡಪ್ರದರ್ಶನ—ಸರಿ ಸರಿ. ನಮ್ಮಷ್ಟು ಚತುರರಾರೂ ಇಲ್ಲ. ಹೀಗೆ ನಾನು ಆಲೋಚನೆ ಮಾಡಿಕೊಳ್ಳುತ್ತಾ, ಬಿಸಿಲಿನ ಝಳವನ್ನು ಈ ಒಳನಗೆಯಿಂದ ತಂಪಿಸಿಕೊಳ್ಳುತ್ತಾ ನಡೆದೆ.

ಬೆಟ್ಟಕ್ಕೆ ನೀರು ಹೊರುವುದು ಏನೂ ಅಷ್ಟು ಸುಲಭವಾದ ಮಾತಲ್ಲ. ತಲೆಯ ಮೇಲಿನ ಸಿಂಬಿ ಯಾವಾಗಲೂ ಸರಿಯಾಗಿ ಕೂರುವುದಿಲ್ಲ. ಹೆಗಲಿನಿಂದ ತಲೆಗೆ ತಲೆಯಿಂದ ಹೆಗಲಿಗೆ ಕೊಡ ಹಾರಾಡುತ್ತಿರುತ್ತದೆ. ನೀರು ತುಳುಕಿ ಮೈಮೇಲೆಲ್ಲಾ ಹರಿದು ಬೆವರಿಡುವುದೇನೊ ತಪ್ಪುತ್ತದೆ. ಇಂಥ ಕಷ್ಟ ಕಾರ್ಯಕ್ಕೆ ಹುರುಪುಗೊಡುವುದು ಒಂದೇ ಒಂದು ವಿಚಾರ. ಈ ನೀರನ್ನು ನಾವು ಹೊರುವುದು ಯಾವೊಂದು ಸಮಾರಾಧನೆಗೂ ಅಲ್ಲ, ಅಥವಾ ಅರವಟ್ಟಿಗೆಯ ಪಾನಕಕ್ಕೂ ಅಲ್ಲ. ಅಂಥ ಪರಿಚಾರಿಕೆ ನಮ್ಮ ಗೌರವಕ್ಕೆ ಕಡಿಮೆ; ಆ ಪುಣ್ಯ ನಮಗೆ ಬೇಕಿಲ್ಲ. ಮೇಲೇರಿ ಹೋಗಿ ದೇವರ ಹೆಸರು ಹೇಳಿ ವೃಥಾ ಸುರಿದುಬಿಡುತ್ತೇವೆಯಲ್ಲಾ—ಈ ನಿಷ್ಪ್ರಯೋಜನತೆಯ ವಿನೋದ, ಇದಕ್ಕೆ ಒಲಿದಿದೆ ನಮ್ಮ ಮನಸ್ಸು. ಸೂಳೆಯ ಕೈಯಲ್ಲಿ ಜೋಳ ಕುಟ್ಟಿಸುವ ಹಾಗೆ ಈ ಆಟದ ಭಾವನೆ ನನ್ನಿಂದ ಈ ಕೊಡವನ್ನು ಮೇಲಕ್ಕೇರಿಸುತ್ತಿದೆ. ಎಲ್ಲರಿಗಿಂತ ಹಿಂದೆ ನಾನು. ಆದರೆ ನನ್ನ ಜೊತೆಗೆ ಒಬ್ಬ ವೃದ್ಧರು ಕೊಡ ವೆತ್ತಿಕೊಂಡು ಬರುತ್ತಿದಾರೆ. ನನಗಿಂತ ಅವರಿಗೆ ಆಯಾಸ ಹೆಚ್ಚು. ಆದರೆ ನರಸಿಂಹದೇವರು ಹಿಂದೆ ಅವರ ಅನುಭವಕ್ಕೆ ಬಂದಂತೆ ನಡೆಸಿದ ಹಲವು ಪವಾಡಗಳ ಕತೆಗಳನ್ನು ನನಗೆ ಹೇಳುತ್ತಾ ಅವರು ಈ ಶ್ರಮವನ್ನು ಮರೆಯುತ್ತಿದಾರೆ. ಅಂತು ಹೀಗೆ ನಾವೆಲ್ಲಾ ಒಂಭತ್ತು ದಿನ ಮೇಲಕ್ಕೆ ನೀರು ಹೊತ್ತು ಹೊತ್ತು ಸಾಕಾಗಿದ್ದೇವೆ. ಇಂದು ಹತ್ತನೆಯ ಮಹಚ್ಛಾಂತಿ ದಿನ. ಯಾರೋ ಮಹಾಶಯರೊಬ್ಬರು ಅಭಿಷೇಕವಾದ ಮೇಲೆ ಸಮಾರಾಧನೆ ಮಾಡಿಸುತ್ತಾರಂತೆ. ಇಂದೂ ಮಳೆ ಬಾರದಿದ್ದರೆ ಆ ಒಂಭತ್ತು ಕಲ್ಲಿನ ಬಾವಿಯೂ ಹಿಂಗಿ ಹೋದಂತಾಗಿ ಇನ್ನು ನಾವು ಕೆರೆಗೆ ಹೋಗಬೇಕಾದೀತು. "ಹುಯ್ಯೊ ಹುಯ್ಯೊ ಮಳೆರಾಯ—ಬಾವೀಲ್ ತೊಟ್ಟೊ ನೀರಿಲ್ಲ."

ಅಭಿಷೇಕ ಬಹು ವಿಜೃಂಭಣೆಯಿಂದ ನಡೆಯಿತು. ಮಳೆ ಬರಲಿ ಬಾರದಿರಲಿ ದೇವರಿಗೆ ಬಲು ತಂಪಾಯಿತು; ಜನಕ್ಕೊಂದು ತೆರದ ಭಕ್ತಿಯ ಪೆಂಪಾಯಿತು; ಸಮರಾಧನೆ ಸೊಂಪೂ ಆಯಿತು. ನಾವು ಹುಡುಗರು

ತಾಂಬೂಲ ಮೆಲ್ಲುತ್ತಾ ಮೇಲಿನ ಪ್ರಾಕಾರದಲ್ಲಿ ಕುಳಿತಿದ್ದೇವೆ. ಕರಿಕಲ್ ಗುಡ್ಡದ ಬಳಿ ಏನೋ ಸ್ವಲ್ಪ ಮೋಡವೆದ್ದ ಹಾಗಿದೆ ಎಂದು ಯಾರೋ ಹೇಳಿದರು. ನಾವು ಝುಗ್ಗನೆದ್ದು ದಿಗಂತಕ್ಕೆ ದೃಷ್ಟಿಯಟ್ಟುತ್ತೇವೆ. ದಿಟ, ಬಸವನ ಹುಳು ತನ್ನ ಚಿಪ್ಪಿನಿಂದ ಹೊರಕ್ಕೆ ತೆವಳುವ ಹಾಗೆ ಕರಿಮೋಡವೊಂದು ಆ ಗುಡ್ಡದ ಹಿಂಬದಿಯಿಂದ ಮೆಲ್ಲನೆ ಮೇಲಕ್ಕೇಳುತ್ತಿದೆ. ಎಂದಿನಂತೆ ಈ ಮೋಡವೂ ಚೆದರೀತು. ಮೋಡಿ ಹಾಕಿ ಇತ್ತ ಕಡೆಗೆ ಸೆಳೆಯಪ್ಪಾ ನಾರಸಿಂಹ, ಎಂದು ಎಲ್ಲರೂ ಉದ್ಗಾರ ತೆಗೆಯುತ್ತೇವೆ. ಬೇಟೆಗಾರರಿಗೆ ಬೇಟೆ ಕಣ್ಣಿಗೆ ಬಿದ್ದಂತಾಗಿದೆ ನಮಗೆ ಈ ಮೇಘದರ್ಶನ. ನರಸಿಂಹಾ ಕಣ್ತೆರೆದು ನೋಡೊ, ಎಂದು ನಾವು ಸ್ವಲ್ಪ ಕಾಲ ಆ ಮೋಡದೆಡೆಗೆ ದೃಷ್ಟಿಯಿತ್ತು, ಅಲ್ಲಿ ಅದು ನಮ್ಮನ್ನು ಅಣಕಿಸುತ್ತಿರುವಂತೆ ಮಿಂಚಿನ ಹಲ್ಲನ್ನು ಕಿರಿಯುತ್ತಾ ಕಿರಿಮಿಂಚಿನ ಹುಬ್ಬು ಹಾರಿಸುತ್ತಾ ಆ ಗುಡ್ಡದ ಮೇಲೆಯೇ ವ್ಯರ್ಥಮಳೆಗರೆಯುವ ನಿಷ್ಕರುಣತನಕ್ಕೆ ಬೇಸರಗೊಳ್ಳುತ್ತಾ, ಶಪಿಸುತ್ತಾ ನಿಲ್ಲುತ್ತೇವೆ; ನಿಂತು ಮನೆಗೆ ಮರಳುತ್ತೇವೆ.

ಆದರೆ ಈ ದಿನ ಯೋಗಾನರಸಿಂಹನಿಗೆ ನಾವು ಹೊಯ್ದ ನೂರು ಕೊಡದ ತಣ್ಣೀರಿನ ತಂಪು, ಮೈಯಿಂದ ಮನಸ್ಸಿಗೆ ಮನಸ್ಸಿನಿಂದ ಚಿತ್ತಕ್ಕೆ ಸೋಕಿರಬೇಕು. ವೃದ್ಧರಿಗೆ ಕೃತ್ಯವೆಂದರೆ ಸೇರದು ತಾನೆ. ಆತನ ಸಮಾಧಿ ಈ ಅಭಿಷೇಕ ಕೃತ್ಯದಿಂದ ಶಿಥಿಲವಾಗಿರಬೇಕು. ಏಕೆಂದರೆ ಮತ್ತೊಂದು ಹಿರಿಯ ಕರಿಮೋಡ ಈಗ ಈಶಾನ್ಯದಿಂದ ಮೆಲ್ಲನೆ ಗವಿಯಿಂದ ಕರಡಿಯಂತೆ ಮೇಲಕ್ಕೇರುತ್ತಾ ಬರುತ್ತಿದೆ. ನಾವೆಲ್ಲಾ ಚಾವಡಿ ಚಾವಡಿಗಳಮೇಲೆ ನೆರೆದು ಅದನ್ನು ನೋಡುತ್ತಿದ್ದೇವೆ. ಮೈ ಕಡುಕಪ್ಪು. ಮಹಿಷಾಸುರನಂತೆ ಭೀಕರ ಮನೋಹರವೀ ಮುಗಿಲು; ತನ್ನ ಅಪ್ರತಿಹತವಾದ ಇಚ್ಛೆ ಇಂದು ಪ್ರತಿಸ್ಪರ್ಧಿತವಾಗಲು ಒಂದು ತೆರದ ಕೋಪದಿಂದ ಮೈಯಲ್ಲಿ ಕಿಚ್ಚಾಡುವಂತೆ ಮಿಂಚು ಹೊಳೆದಾಡುತ್ತಿದೆ ಇದರೊಡಲಿನಲ್ಲಿ. ನಮ್ಮೂರಿಗೆ ಬರುವುದಕ್ಕೆ ಇದಕ್ಕೆ ಮನಸ್ಸಿಲ್ಲ—ನಮಗೆ ಗೊತ್ತು. ಕೆಳಗಣ ಅಷ್ಟಗ್ರಾಮದ ಬಯಲಿಗೆ ಹೋಗುವುದಕ್ಕೆ ಅದಕ್ಕೆ ಆಸೆ. ಆದರೆ ನರಸಿಂಹನೆಚ್ಚೆತ್ತು ಈ ದಿನ ಅದಕ್ಕೆ ಮೋಡಿಯ ಮಂತ್ರವನ್ನು ಹಾಕುತ್ತಿದಾನೆ. ಈ ಸ್ಪರ್ಧೆ ಮಂಗಳ ಭಯಂಕರವಾಗಿದೆ. ನಾವು ಉಸಿರುಕಟ್ಟಿ ನೋಡುತ್ತಿದೇವೆ.

ಮೋಡವೆದ್ದು ಪಟಗುಟ್ಟುತ್ತಿದೆ; ಮಿಂಚಿನ ಬಾಲದಿಂದ ಮೈಯನ್ನೆಲ್ಲಾ ಹೊಡೆದುಕೊಳ್ಳುತ್ತಿದೆ; ಮೈಮುರಿದು ನಿಮಿರುತ್ತಿದೆ; ಅತ್ತ ಇತ್ತ ಹೊರಳಾಡುತ್ತಿದೆ; ಜೊತೆಗೆ ಬನ್ನಿರೆಂದು ಆ ಮೂಲೆಯಲ್ಲಡಗಿರುವ ಮೋಡಗಳ

ಗೆಲ್ಲಾ ಆರುತ್ತಿದೆ. ಹೋ ಹೋ ಈಗ ನಮ್ಮ ಬಾನು ತುಂಬ ಅವೇಯೆ. ನರಸಿಂಹಗಿರಿಯನ್ನು ಮುತ್ತಿ ಹೊತ್ತುಕೊಂಡು ಹೋಗುವಂತೆ ಅವುಗಳ ಸನ್ನಾಹ. ನರಸಿಂಹ ಮಾತ್ರ ಮೌನದಿಂದ ಅಚಲನಾಗಿ ಮಂತ್ರೋಚ್ಚಾರಣೆ ಮಾಡುತ್ತಿದಾನೆ. ಈ ಹೂಂಕಾರ ಅವನದು. ಮೋಡಗಳನ್ನೆಲ್ಲಾ ತನ್ನೆಡೆಗೆ ಸೆಳೆದುಕೊಳ್ಳುವ ಈ ಸುಯ್ ಗಾಳಿಯು ಉಚ್ಛ್ವಾಸವೂ ಅವನದೇ. ತಪ್ಪಲಿನ ಊರಿನಲ್ಲಿ ನಾವು ಈ ಬೆರಗಿನ ನೋಟವನ್ನು ಹರ್ಷ ಕುತೂಹಲಗಳಿಂದ ನಿರೀಕ್ಷಿಸುತ್ತಿದೇವೆ. ಈಗ ಗಿರಿಯ ಶಿಖರ ಕಣ್ಣಿಗೆ ಕಾಣದು ; ಮಿಂಚಿನ ಪಾಶಗಳು ಮಾತ್ರ ಬಹು ಬಿರುಸಾಗಿವೆ. ಸುರುಳಿ ಸುರುಳಿಯಾಗಿ ಬೆಟ್ಟದ ಶಿಖರವನ್ನು ಕುಣಿಕೆ ಹಾಕಿ ಸೆಳೆಯುವಂತೆ ಬಹು ಚಮಕಿನಿಂದ ಹೊಂಚಾಡುತ್ತಿವೆ. ಕಿವಿಯೊಡೆಯುವಂತೆ ಸಿಡಿಲಾರ್ಭಟ ; ಶಿಖರವುರುಳುವಂತೆ ಉರುಳುರುಟು ಸಿಡಿ ಸದ್ದು. ಓ, ಮೋಡ ಸೋತು ಮೈಗರೆಯಿತು. ಹನಿಬಿತ್ತು ಹನಿ ಬಿತ್ತು, ಮುತ್ತಿನಂಥ ಮಳೆ ಬಿತ್ತು. ದೆಸೆಯೆಲ್ಲಾ ಒಂದಾದವು. ಸೂರ್ಯನ ಸುದ್ದಿಯೇ ಇಲ್ಲ. ಮಲೆ ಇದೆಯೋ ಇಲ್ಲವೋ ಅದೂ ಬರಿ ಮುಗಿಲೇ ಆಯಿತೋ ತಿಳಿಯದು. ಗಾಳಿ ಸುಮ್ಮನೆ ಅಶ್ವತ್ಥಮರದ ಮೇಲೆ ಕೂತಿತೋ ಏನೋ. ಬಾನಿಗೂ ಭೂಮಿಗೂ ಸೇತುವೆ ಕಟ್ಟಿದ ಹಾಗೆ ಒಂದೇ ಧಾರೆಯಲ್ಲಿ ಮಳೆ ; ಬೆಟ್ಟದ ತುಂಬ ಮಳೆ ; ಊರು ತುಂಬ ಕಣಿವೆ ತುಂಬ ಮಳೆ. ಇಡೀ ಸುತ್ತಿಗೇ ಬಲೆ ಬಿದ್ದ ಹಾಗೆ, ಬಾನು ಕರಗಿದ ಹಾಗೆ ನೀಲ ಜಲಧಾರೆ. ಬೀದಿಯಲ್ಲಿದ್ದವರಲ್ಲಿ ಕೆಲವರು ಮಳೆ ಬಂತು ಮಳೆ ಬಂತು ಎಂದು ಕೂಗು ಹಾಕಿಕೊಂಡು ಜಗಲಿಗಳಿಗೆ ಹಾರುತ್ತಿದಾರೆ. ಮತ್ತೆ ಕೆಲವರು ಹೋ ಹೋ ಎಂದಾರುತ್ತಾ ನೆನೆಯುತ್ತಲೇ ಓಡಾಡುತ್ತಿದಾರೆ. ಅಮೃತಸೇಚನದಂತಿದೆ ಈ ಅಭಿಷೇಕ ಅವರಿಗೆ. ಎಂಥ ಬೀಕರ ಮಂಗಳ ದರ್ಶನ ಈ ಮಳೆಯ ದಾಳಿ. ಕಡಲಿನಿಂದ ಉಕ್ಕುವ ಹಾಲಾಹಲವನ್ನು ಕುಡಿದು ಅಮೃತವರ್ಷಕ್ಕೆಡೆಗೊಟ್ಟ ಶಿವನಂತೆ ತೋರುತ್ತಿದಾನೆ ನಮ್ಮ ನರಸಿಂಹ. ಭೋರೆಂದು ಇಳಿಯುವ ಗಂಗೆಗೆ ಶಿವನು ಹರಡಿದ ಜಟೆಯಂತೆ ತೋರುತ್ತಿದೆ, ಮಳೆಯ ಶಿಖರದ ಗುಡಿ. 'ನಾನು ಏನು ಹೇಳಿದೆ ನೋಡು' ಎಂದು ನನ್ನ ಜತೆಯಲ್ಲಿ ಕೊಡ ಹೊತ್ತ ಮುದುಕರು ಉತ್ತರೀಯವನ್ನು ಹಾರಿಸುತ್ತಾ ತೋಳುಗಳನ್ನು ರೆಂಬೆಗಳಂತೆ ಕುಲುಕಿಸುತ್ತಾ ಬೀದಿಗೆ ಒಂದು ಸಲ ಹಾರಿ ಮಳೆಯಲ್ಲಿ ತೊಯ್ಯುತ್ತಾ ಕುಣಿದು ಮರಳಿ ಜಗಲಿಗೆ ಬಂದು ಝುಂ ಎಂದು ಎರಡು ಕಾಲೆತ್ತಿ ನೆಗೆಯುತ್ತಿದ್ದಾರೆ. ಇವರ ಉತ್ಸಾಹ ಜನಕ್ಕೆಲ್ಲಾ ಹರಡುತ್ತಿದೆ. ಇಂದು ಈ ಮೊದಲ ಮಳೆಯಲ್ಲಿ ನೆನೆಯುವುದೇ

ಒಂದು ಆನಂದ. ಕೊಳಕ್ಕೆ ನೀರು ಬರುವ ಕಾಲುವೆ ಸರಿಯಾಗಿದೆಯೋ ಇಲ್ಲವೋ, ದಾರಿಯ ಶೋಧಿಸುವ ತೊಟ್ಟಿಯನ್ನು ಮರಳಿದೆಯೋ, ಸಲಾಕಿಯ ಒಂದರಿಗಳಿಗೆ ಎಲೆ ಕಸಕಡ್ಡಿ ಬಂದು ಮುಚ್ಚಿಕೊಂಡುಬಿಡುತ್ತವೆ ತೆಗೆದುಹಾಕಬೇಕು, ಬನ್ನಿ ಬನ್ನಿ, ಎಂದು ಒಂದು ಗುಂಪು ಬೆಳ್ಳಗಿರುವ ಗರಿಗರಿ ಬಟ್ಟೆಗಳಿಗೆ ಬೀದಿಯ ಕೆಂಬಣ್ಣದ ನೀರು ಹಾರುತ್ತಿರುವುದನ್ನು ಲೆಕ್ಕಿಸದೆ ಮಳೆಯಲ್ಲೇ ಓಟ ಹಾಕುತ್ತಿದ್ದಾರೆ. ಕಣಿವೆಯ ಹೆಬ್ಬಳ್ಳ ತುಂಬಿ ಬರುತ್ತಿದೆ ನೋಡೋಣ ಬನ್ನಿ ಎಂದು ಮತ್ತೆ ಕೆಲವರು ಅಲ್ಲಿಗೆ ಹೊರಡುತ್ತಿದಾರೆ. ಜಗಲಿಯ ಮೇಲೆ ಮಕ್ಕಳೆಲ್ಲಾ ನೆರೆದು ಸಿಕ್ಕಿದ ಕಾಗದ ಕಡ್ಡಿ ಕಸಗಳನ್ನೆಲ್ಲಾ ಹೆಬ್ಬಾವಿನಂತೆ ಹರಿದು ಬರುವ ಚರಂಡಿಯ ನೆರೆಗೆ ಹಾಕುತ್ತಿದಾರೆ. ನೂರಾರು ಹಾವುಗಳು ಹರಿಯುವಂತೆ ಬೀದಿಯ ನಡುವೆ ಜಲವೇಣಿಗಳು ಹರಿಯುತ್ತಿವೆ. ಈ ನೆರೆಯ ಮೇಲೆ ಮಳೆ ಧಾರೆ ಬಿದ್ದು ಕುಳಿಕುಳಿ ಸುಳಿಸುಳಿಯಾಗಿ ಸಾವಿರಾರು ಗುಬ್ಬಚ್ಚಿಗಳು ಕುಪ್ಪಳಿಸುತ್ತಿರುವಂತೆ ಮನೋಹರವಾಗಿದೆ. ಹುಡುಗರ ಹಿಂದೆ ಹೆಂಗಸರೆಲ್ಲಾ ಮಡಿ ಮೈಲಿಗೆ ಮರೆತು ಈ ರಮ್ಯ ಪ್ರವಾಹಗಳ ವಿನೋದವನ್ನು ನೋಡುತ್ತಿದಾರೆ. ಇದರಲ್ಲಿ ಎಂಜಲೆಲೆಗಳು ಕೊಚ್ಚಿ ಹೋಗುತ್ತಿರುವುದು ಬಹು ವಿನೋದಕರವಾಗಿದೆ. 'ಓ ಓ ಆ ಮೂಲೆಮನೆ ಬಿತ್ತು, ಆ ಮುದುಕಿ ಹುಯಿಲಿಡುತ್ತಾಳೆ;—ಭಲೆ ಭೇಷೆ'ಂದು ಹರ್ಷಾಧಿಕ್ಯದ ನಿರ್ದುಷ್ಟ ನಿರಾನುಕಂಪದಿಂದ ನನ್ನ ಗೆಳೆಯನೊಬ್ಬ ಎಲ್ಲರಿಗೂ ಸುದ್ದಿ ಸಾರುತ್ತಿದಾನೆ.

ಇಂತು ನಮ್ಮೂರಿಗೆ ಅಂದು ನೆಲವೆಲ್ಲ ಕಂಪಾಗುವಂತೆ, ನಾಡೆಲ್ಲ ತಂಪಾಗುವಂತೆ, ನಮ್ಮೆಲ್ಲರ ದಗೆಯಿಂಗುವಂತೆ, ಹಳೆ ಮನೆಗಳು ಬೀಳುವಂತೆ, ಕೆರೆಗೆ ಮೂರು ಮೆಟ್ಟಿಲು ನೀರು ಬರುವಂತೆ, ಕಲ್ಯಾಣಿಯ ಕಿರಿತೂಬು ಮುಳುಗುವಂತೆ, ಕಲ್ ತೊಟ್ಟಿಲಿನ ತೂರೆ ಕರೆಯ ಕಲ್ಲುಮಂಟಪವನ್ನುರುಳಿಸಿ ಮೊರೆಯುವಂತೆ, ಕಣಿವೆಯ ಕೆಳಗಿನ ಹೆಬ್ಬಳ್ಳದ ಘೋರ್ಗರೆತ ಊರಿಗೆ ಕೇಳಿಬರುವಂತೆ, ಕೊಳ ತುಂಬಿ ತುಳುಕಾಡುವಂತೆ, ಎಲ್ಲೆಲ್ಲೂ ನಗೆ ಬೆಳಕಾಡುವಂತೆ, ಮಟ ಮಟ ಮಧ್ಯಾಹ್ನದಲ್ಲಿ ಹಾರುವರ ಸಹಸ್ರ ನಾಮದ ಆರ್ತಘೋಷ ಶಾಂತವಾಗಿ ಕಪ್ಪೆಗಳ ಮನೋಹಾರಿ ಮಹಾಮೇಳವು ಇರುಳಿನ ತಾರೆ ಬೆಳಕಿನ ತಂಪಿನಲ್ಲಿ ಮೊಳಗುವಂತೆ, ಮಳೆ ಬಂದಿತು ಆವೊತ್ತು. ವೃದ್ಧರೂ ಕೂಡ ಕಂಡರಿಯರು ಇಂಥ ಮಳೆಯನ್ನು. ಚರಂಡಿ ಬೀದಿ ಒಂದಾಗಿ ಪ್ರವಾಹ ಹರಿಯಿತು. ಕೊಳೆಯ ಕಪ್ಪು ನೀರು ಕೆಂಬಣ್ಣಕ್ಕೆ ತಿರುಗುವವರೆಗೂ ಮಳೆ ಬಿತ್ತು. ದೇವಸ್ಥಾನದ ನೀರ್ಗಿಂಡಿಗಳಿಂದ ಆನೆಯ

ಸೊಂಡಿಲಂತೆ ನೀರು ಬೀಳುತ್ತಿತ್ತು—ಒಂದೇ ಗಾತ್ರವಾಗಿ—ಆಲದ ಬಿಳಲಿನಂತೆ ನೆಲಕ್ಕೂರಿತ್ತು. ಮಳೆ ನಿಂತು ಬಿಸಿಲು ಬಂದಮೇಲೆ ಆ ಚಂದವನ್ನು ಹೇಳತೀರದು. ಎರಡು ಗಳಿಗೆಗಳಲ್ಲಿ ನಮ್ಮೂರಿಗೆ ಎಂಥ ಮಾರ್ಪಾಟಾಗಿಬಿಟ್ಟಿದೆ. ಮೊಟ್ಟೆಯೊಡೆದು ಗರಿಮೂಡಿ ಬರುವ ಗರುಡನಂತಾಗಿದೆ ಯದುಗಿರಿ. ಪೊರೆಬಿಟ್ಟ ಹಾವಂತೆ, ಮುಪ್ಪನ್ನು ಕಳೆದ ಯಯಾತಿಯಂತೆ, ಮಜ್ಜನಗೈದ ಅಪ್ಸರೆಯಂತೆ ಕಂಗೊಳಿಸಿವೆ ಕಣಿವೆ, ಬೆಟ್ಟ, ಊರು. ಇಷ್ಟೊಂದು ನಲವಿಗೆ ನಾವು ಹತ್ತು ದಿನ ನಡುಬಿಸಿಲಿನಲ್ಲಿ ಅಭಿಷೇಕದ ನೀರನ್ನು ಮಲೆಗೆ ಹೊತ್ತ ಶ್ರದ್ಧೆ ಶ್ರಮ ಕಾರಣ. ಅಜ್ಞಾನವೆನ್ನುತ್ತೀರಾ ? ಈ ಅಜ್ಞಾನದಿಂದ ಎಂಥ ಮಹದಾನಂದ ನಮಗಿಂದು ದೊರಕಿತು! ನಮ್ಮ ಮಲೆ, ನಮ್ಮ ವೃದ್ಧಯೋಗಾನರಸಿಂಹ ನಮಗೆ ಎಷ್ಟು ಪ್ರಿಯರಾಗಿಬಿಟ್ಟಿದ್ದಾರೆ. ನಾವು ಏನೂ ಮಾಡದೆ ಸುಮ್ಮನೆ ಶೋಕಮೂಕರಾಗಿ ಕೂತಿದ್ದರೂ ಈ ಮಳೆ ಬರುತ್ತಿತ್ತೇನೊ. ಆದರೆ ಇಷ್ಟು ಸಂತೋಷ ನಮಗಾಗುತ್ತಿರಲಿಲ್ಲ. ಗರುಕೆ ಅಲ್ಲಾಡಿದರೆ ತಾರೆ ನೋಯುವುದಂತೆ. ನಮ್ಮಾರ್ತ ಶ್ರದ್ಧೆ ಮುಗಿಲನ್ನಲ್ಲಾಡಿಸದೆ ?

ಇನ್ನು ಈ ವಾದ ಬೆಳಸಿ ಏನು ಪ್ರಯೋಜನ ? ನಾಳೆ ತೊಟ್ಟಿಲ ಮಡುವಿನ ತೊರೆಗೆ ಸ್ನಾನಕ್ಕೆ ಹೋಗಬೇಕೆಂದು ಊರೆಲ್ಲಾ ಗುಂಪು ಗುಂಪಾಗಿ ಯೋಚಿಸುತ್ತಿದೆ. ಯಾರ ಯಾರ ಮನೆಯಲ್ಲಿ ಏನೇನು ಮಾಡಿಸಬೇಕೆಂದು ಸಲಹೆಗಳು ವಿಪರೀತವಾಗಿ ಬರುತ್ತಿವೆ. ನಾನೂ ಹತ್ತು ಜನಕ್ಕೆ ಪೊಂಗಲಿಗೆ ಒಪ್ಪಿಕೊಂಡಿದ್ದೇನೆ. ಈಗ ಈ ಸಂಜೆಯ ದಾಳಿಂಬೆರಸದ ಬೆಳಕಿನಲ್ಲಿ ಮಳೆಯ ಮೆತ್ತನೆಯ ಕಿರು ನೀರೋಟಗಳನ್ನು ತುಳಿಯುತ್ತಾ—"ಆಪಃ ಪುನಂತು ಪೃಥಿವೀಂ ಪೃಥಿವೀ ಪೂತಾ ಪುನಾತು ಮಾಂ"—ಎಂದು ಹೇಳಿಕೊಂಡು ನಡೆಯುವ ಆ ವೃದ್ಧರನ್ನು ಹಿಂಬಾಲಿಸಿ, ನಮ್ಮ ಚೆಲುವೆ ಅರಸಿನ ಕೊಳ ತುಂಬುತ್ತಿರುವ ಅಂದವನ್ನು ನೋಡೋಣ ಬನ್ನಿ. ಬದುಕಿಸಿದೆಯಾ ನಮ್ಮಪ್ಪ, ನರಸಿಂಹ!

# ಬೀದಿಯ ಬಸವ

ಇಲ್ಲ; ಇನ್ನು ದೇವಸ್ಥಾನದಲ್ಲಿ ಕುಳಿತು ಈ ಪೊಂಗಲಿಗೂ ತೇಂಗೊಳಲಿಗೂ ಕಾದು ಪ್ರಯೋಜನವಿಲ್ಲ. ಈಗ ಹಸಿವನ್ನು ತೀರಿಸಿಕೊಳ್ಳುವುದಕ್ಕೆ ಬೇರೊಂದು ದಾರಿ ಹುಡುಕಬೇಕು—ಎಂದುಕೊಂಡೆ ನಾನು ಬಹಳ ಬೇಸರದಿಂದ. ಅಂದು ಗುಡಿಯಲ್ಲಿ ವಿಶೇಷೋತ್ಸವ, ತೇಂಗೊಳಲನ್ನು ಸಾವಿರ ಕಟ್ಟಲೆ ಮಾಡಿ ಊರವರಿಗೆಲ್ಲ ಹಂಚಬೇಕಾದರೆ ದೊಡ್ಡ ಉತ್ಸವವೇ ಆಗಿರಬೇಕಲ್ಲವೇ ? ಈ ಉತ್ಸವದ ಅಥವಾ ಅದರ ಅಂಗವಾದ ಕಲಹದ ವರ್ಣನೆ ಈ ಬರವಣಿಗೆಯ ವಸ್ತುವಲ್ಲ. ಇದರ ಶೂರ ಬೀದಿಯ ಬಸವ. ನಾನು ನಮ್ಮ ಕಥಾನಾಯಕನನ್ನು ಹುಡುಕಿಕೊಂಡು ಹೋಗತಕ್ಕವನಿದ್ದೇನೆ. ದೇವಸ್ಥಾನದಲ್ಲಿ ಕುಳಿತು ಕುಳಿತು ಬೇಸರವಾಗಿದೆ. ಕೂಳಿದ್ದೆಡೆ ಕಲಹ. ಆದರೆ ಇದನ್ನು ಅತಿಯಾಗಿ ಬೆಳಸಿಕೊಂಡು ಹೋಗಬಾರದು. ಇದೇನು ದಾರಿತಪ್ಪಿ ನೀತಿ ಹೇಳುವುದಕ್ಕೆ ಹೊರಟುಬಿಟ್ಟೆನಲ್ಲಾ. ಇತರರ ಕೆಲಸಕ್ಕೆ ಬಾರದ ಸ್ಪರ್ಧೆಯಿಂದ ನಮ್ಮ ಹಸಿವು ಹೆಚ್ಚಿ ನಮಗೆ ತಾಳ್ಮೆ ತಪ್ಪಿದರೆ ನಾವು ಒಂದು ಹಿರಿಯತನದಿಂದ ನೀತಿ ಹೇಳದೆ ಏನು ಮಾಡಬೇಕು ? ಆದರೆ ಕೇಳುವವರಾರೂ ಇಲ್ಲದೇ ಹೋದುದರಿಂದ, ನಾನು ನಡುವಿಗೆ ಸಿಕ್ಕಿಸಿದ್ದ ಎರಡಾಣೆಯ ಬಿಲ್ಲೆ ಇದೆಯೋ ಇಲ್ಲವೋ ಎಂದು ಮುಟ್ಟಿನೋಡಿಕೊಂಡು ಅಂಗಡಿಯ ಬೀದಿಯ ಕಡೆಗೆ ಹೊರಟೆ.

ಈ ಊರ ಅಂಗಡಿಯಲ್ಲಿ ನಮಗೆ ಸಿಕ್ಕಬೇಕಾದುದು ತಾನೇ ಏನಿದೆ. ಇಲ್ಲ ಬಾಳೆಯ ಹಣ್ಣು, ಇಲ್ಲ ತೆಂಗಿನಕಾಯಿ, ಇಲ್ಲ ಕೊಬ್ಬರಿ ಮಿಠಾಯಿ. ಕೊಬ್ಬರಿ ಮಿಠಾಯಿಯನ್ನು ಈ ವಯಸ್ಸಿನಲ್ಲಿ ನಾನೇ ಹೋಗಿ ಕೊಂಡು ತಿನ್ನುವಹಾಗಿಲ್ಲ. ಮರ್ಯಾದೆ ಹೋಗುತ್ತದೆ. ಹುಡುಗರ ಕೈಯಲ್ಲಿ ತರಿಸಬೇಕು—ಎದೆಗಾರಿಕೆಯ ಕೆಲಸ. ಎಲ ಎಲ ಇದೇನು ಕೇಡುಗಾಲ, ನಮ್ಮ ರಾಮುನ ಅಂಗಡಿಯಲ್ಲಿ ಒಂದು ಹಲಸಿನ ಹಣ್ಣು ಇದೆ ಈಹೊತ್ತು. ಮುಳ್ಳು ತೋರವಾಗಿ ಅದರ ಮೊನಚು ಕಪ್ಪು ತಿರುಗಿದೆ. ಒಳಮೈ ಹಳದಿಯಾಗಿದೆ. ಒಳ್ಳೆ ಹದದ ಹಣ್ಣು. ಹೊಸೂರಿನ ಮರದ್ದಿರಬೇಕು ಎಂದು ನಾನು ಒಂದು ತೆರದ ಉದಾಸೀನ ಭಾವದಿಂದ (ಖರೀದಿ ಹೆಚ್ಚ ಬಾರದೆಂದು)—ಅದರ ಮೌಲ್ಯವನ್ನು ವಿಚಾರಿಸಿ, ಎರಡಾಣೆಗೇ (ನಫೆ ಎಂದು ಮನದಲ್ಲೇ ಹಿಗ್ಗಿ)—ಅದನ್ನು ಕೊಂಡುಕೊಂಡೆ. ಬರುವಾಗ ದಾರಿಯಲ್ಲಿ ಯಾರೂ ನೋಡುವವರಿರಲಿಲ್ಲ.

ಮನೆಯ ಬೀಗದ ಕೈ ನನ್ನಲ್ಲಿ ಇದೆ. ನಮ್ಮ ಮನೆಗೆ ಹೋಗಬೇಕಾದರೆ ಒಂದು ಓಣಿಯ ಬಾಗಿಲನ್ನು ತೆರೆದು ದಾಟಿ ಹೋಗಬೇಕು. ಆತುರದಿಂದ ನಾನು ಮನೆಗೆ ಬಂದು ಕುಡುಗೋಲಿಗೆ ಎಣ್ಣೆ ಸವರಿ ಕೈಗೂ ಸವರಿಕೊಂಡು, ಒಳಗೆ ಕತ್ತಲಾದುದರಿಂದ ಓಣಿಯಲ್ಲಿ ಹಣ್ಣನ್ನು ಹೆಚ್ಚಿ ತೊಳೆ ಬಿಡಿಸುವುದಕ್ಕೆ ಪ್ರಾರಂಭಿಸಿದೆ. ಓಣಿಯ ಬಾಗಿಲನ್ನು ಹಾಕಿಕೊಳ್ಳದೆ ಬಂದುದು ತಪ್ಪಾಯಿತು. ನಾನು ಹಣ್ಣು ಸುಲಿದು ಕೀತನ್ನು ಮಾಡುತ್ತಾ ರಸ ತೊಟ್ಟಿಕ್ಕುತ್ತಿದ್ದರೂ ಕೊಬ್ಬರಿಯ ಹಾಗೆ ಮುರುಮಾಗಿದ್ದ ತೊಳೆಗಳನ್ನು ಕುಕ್ಕೆಗೆ ಹಾಕುತ್ತಿರುವಾದ ಓಣಿಯ ಬಾಗಿಲು ತೆರೆದುಕೊಂಡು ಒಳಕ್ಕೆ ಬಂದೇಬಿಟ್ಟಿದಾನೆ, ಬೀದಿಯ ಬಸವ. ಹಲಸಿನ ತೊಳೆಯ ಸ್ವಾದುತೆಯ ಸಂತೋಷದಲ್ಲಿ ನನಗೆ ಬಾಗಿಲು ಗಿರುಕೆಂದುದೂ ಬಸವ ಬಂದುದೂ ಗೊತ್ತಾಗಲಿಲ್ಲ. ಬಂದವನು ಬುಸಗುಟ್ಟುತ್ತಾ ಹಣ್ಣಿಗೇ ಮುಸುಡಿಯನ್ನು ಹಾಕಿಬಿಟ್ಟಿದಾನೆ. ತಲೆಯನ್ನು ಮೇಲೆಕ್ಕೆತ್ತಿ ನೋಡಿದರೆ ಈ ಭೂತಾಕಾರದ ಬಸವ! ನನಗೆ ಯಾವ ಪ್ರಾಣಿಯಾದರೂ ಸರಿಯೆ, ಅಂಜಿಕೆ. ಎಳೆಯ ಕರುಗಳು ಕೂಡ ನನ್ನನ್ನು ಕಂಡರೆ ಗುದ್ದುತ್ತವೆ. ಚೇಲಿ ಸ್ವಲ್ಪ ಹೊತ್ತು ಮಡಿಲಿನಲ್ಲಿ ತಂಗಿದ್ದರೂ ಹ್ಹಾವಾಹ್ ಎಂದು ಇದ್ದಕ್ಕಿದ್ದ ಹಾಗೆ ಉಗುರು ಊರಿ ಹಾರಿಹೋಗುತ್ತದೆ. ಇನ್ನು ಈ ತೋರವಾದ ಹಿಳಲಿನ, ಗುಜ್ಜುಗೊಂಬಿನ, ನೆಲದವರೆಗೂ ನೇತಾಡುವ ಕೊರಳ ತೊಗಲಿನ, ಬೃಹದ್ವೃಷಣದ ಭೀಮ ವೃಷಭ ನನಗೆ ಅಂಜಿ ಹಿಂದಕ್ಕೆ ನಿಲ್ಲುತ್ತದೆಯೇ? ಆದುದರಿಂದ ನಾನೇ ಅಂಜಿ ಹಣ್ಣನ್ನಲ್ಲೆ ಬಿಟ್ಟು ಹಿಂದಕ್ಕೆ ಜಿಗಿದೆ. ಆದರೆ ಹಣ್ಣು ಅಪರೂಪವಾದದ್ದು. ಹೊಟ್ಟೆಯಲ್ಲಿ ಹಸಿವು, ಎದೆಯಲ್ಲಿ ಭಯ. ದೂರದಲ್ಲೆ ಹ್ಹು ಎಂದೆ. ಬಸವ ಸ್ವಲ್ಪ ತಬ್ಬಿಬ್ಬಾಗಿ ಹಣ್ಣನ್ನು ಬಿಟ್ಟು ಸಿಪ್ಪೆಯನ್ನು ಬಾಯಲ್ಲಿ ಕಚ್ಚಿಕೊಂಡು ಮೆಲ್ಲುತ್ತಾ ನನ್ನನ್ನು ದುರುದುರನೆ ನೋಡಿ ನಿಂತುಕೊಂಡಿತು. ನಾನು ಸರಕ್ಕನೆ ಉಳಿದ ಹಲಸಿನ ಹಣ್ಣಿನ ಚೂರನ್ನೂ ಕುಕ್ಕೆಯನ್ನೂ ಎತ್ತಿಕೊಂಡು ಹಿಂದಕ್ಕೆ ಸರಿದು ನಿಂತುಕೊಂಡೆ. ಬಸವ ಆ ಸಿಪ್ಪೆಯನ್ನು ಮುಗಿಸಿ ಮತ್ತೊಂದಕ್ಕೆ ಬಾಯಿಕ್ಕಿ ನನ್ನನ್ನು ಒಂದು ತೆರದ ಔದಾಸೀನ್ಯ ಭಾವದಿಂದ ನಿಟ್ಟಿಸುತ್ತಾ ಅಲುಗದೆ ನಿಂತುಕೊಂಡೇ ಇತ್ತು. ನನಗೂ ಅದನ್ನು ಕಂಡರೆ ಒಂದು ಕುತೂಹಲವುಂಟಾಗಿ ಅದೇನಾದರೂ ತಿವಿಯುವುದಕ್ಕೆ ಬಂದರೆ ನಾನು ಬೇಗನೆ ಒಳಕ್ಕೆ ಹೋಗಿ ಬಾಗಿಲುಹಾಕಿಕೊಳ್ಳುವಂತೆ ಅದನ್ನು ಓರೆಮಾಡಿ ಕುಕ್ಕೆಯನ್ನು ಹೊಸಿಲೊಳಕ್ಕೆ ಇಟ್ಟು, ಉಳಿದ ಹಣ್ಣನ್ನು ಕೀತುಮಾಡಿ ತೊಳೆ ಬಿಡಿಸುತ್ತಾ ಸಿಪ್ಪೆಯನ್ನು ಬಸವನೆಡೆಗೆ ಎಸೆಯುತ್ತಾ ಹವಣಾಗಿ ಹೊಸಿಲ ಮೇಲೆ ಕುಳಿತೆ.

ಕುಳಿತು ನಾನೂ ಅದನ್ನು ದುರುದುರು ನೋಡಿದೆ. ಈ ದೃಷ್ಟಿಯುದ್ಧದಲ್ಲಿ ನಾವಿಬ್ಬರೂ ಸೋಲಲಿಲ್ಲ. ಇಬ್ಬರೂ ಮಿತ್ರಗಾದೆವು ಅಷ್ಟೆ. ಸ್ವಲ್ಪಹೊತ್ತಿನ ಮೇಲೆ ಹಲಸಿನ ತೊಳೆಯ ರುಚಿ ನನ್ನ ಬಾಯಿಗೂರಿ, ಸಿಪ್ಪೆಯ ರುಚಿ ಬಸವನ ಬಾಯಿಗೂರಿ, ಕೀಶಿನ ಕಿರುತೊಳೆಗಳು ದಕ್ಕದೆ ಹೋದುವಲ್ಲಾ ಎಂದು ಕರಿಕರಿ ಹಿಂಗಿ, ನಮ್ಮಿಬ್ಬರ ಮನಸ್ಸೂ ಇಂತು ಸ್ವಸ್ಥವಾದಾಗ, ಬಸವ ನನಗೆ ಅಷ್ಟು ಭಯಂಕರನಾಗಿ ಕಾಣಲಿಲ್ಲ. ಬೇಡದವನಾಗಿಯೂ ತೋರಲಿಲ್ಲ. ನಮ್ಮ ಮನೆ ಕರುವಿನ ತಂದೆಯಾಗಿರಬಹುದೀತ. ಈವೊಂದು ದಿನವಾದರೂ ಈ ತೊಂಡು ತಿರುಗುವ ಅಳಿಯನನ್ನು ಭಾವಿಸೋಣ ಎಂದುಕೊಂಡು ನಮ್ಮ ಮನೆ ಹಸುವಿಗೂ ಕೆಲವು ಸಿಪ್ಪೆಗಳನ್ನು ಮಿಗಿಸಿಟ್ಟುಕೊಳ್ಳದೆ ಎಲ್ಲವನ್ನೂ ಬಸವನಿಗೇ ಬಿಟ್ಟುಕೊಡಬೇಕೆಂದು ಮನಸ್ಸುಮಾಡಿ ನಾನು ತೊಳೆಯನ್ನು ಮೆಲ್ಲುತ್ತಾ ಅದಕ್ಕೆ ಕೀತನ್ನೆಸೆಯುತ್ತಾ ಈತನ ಪರಿಚಯಾಭಿಕಾಂಕ್ಷೆಯಿಂದ ಕುಳಿತೆ.

ಬಸವ ದಿಟವಾಗಿ ಬಲು ದೊಡ್ಡದು. ನಮ್ಮ ಓಣಿಯು ತುಂಬ ಅವೇಯು. ನಾನು ಹೊರಕ್ಕೂ ಹೋಗುವ ಹಾಗಿಲ್ಲ, ಬೇರೆಯವರು ಮನೆಯೊಳಕ್ಕೂ ಬರುವಹಾಗಿಲ್ಲ, ಹಾಗೆ ನಿಂತುಬಿಟ್ಟಿದೆ. ಇದನ್ನು ಹಿಡಿದು ನಿಲ್ಲಿಸುವವರು ನಮ್ಮ ಊರಿನಲ್ಲಿ ಯಾರೂ ಇಲ್ಲ. ಕಿರುಬನ ಕೈಯಲ್ಲಿ ಪರಚಿಸಿಕೊಂಡು ಅದನ್ನು ತಿವಿದು ಎತ್ತಿಹಾಕಿ ಬದುಕಿಬಂದಿತ್ತು ಈ ಪ್ರಾಣಿ. ತನ್ನನ್ನು ಕೆಣಕಿದವರನ್ನು ಇದು ತಿವಿಯುವುದಕ್ಕೆ ಹಿಂದು ಮುಂದು ನೋಡುತ್ತಿರಲಿಲ್ಲ. ಹಣ್ಣು ಕಾಯುಂಗಡಿಯವರಿಗೂ ಇದರ ಅಂಜಿಕೆ ಹೆಚ್ಚು. ಇದರಿಂದ ನಮ್ಮೂರಿಗೆ ಒಂದು ಕಳೆ. ತುರುಗಾಹಿ ಈರನೊಬ್ಬನಿಗೇ ಇದರೊಡನೆ ಬಳಕೆ ಮತ್ತು ಮಾತು. ನಾನು ಊರಿಗೆ ಬಂದಾಗ ಇದನ್ನು ಆಗಾಗ ದೂರದಿಂದ ನೋಡಿದ್ದೇನೇ ಹೊರತು ಇಷ್ಟು ಹತ್ತಿರದಲ್ಲಿ ಈ ಪ್ರಸನ್ನ ಭಾವದಲ್ಲಿ ನೋಡಿರಲಿಲ್ಲ. ಇಂಥ ಮಹಾ ವೃಷಭನನ್ನು ನಾನು ಕೌತುಕದಿಂದ ನೋಡುತ್ತಾ, ಈ ಬೃಹದ್ವಸ್ತುವನ್ನು ನಮ್ಮ ಮನೆ ಓಣಿಗೆ ಎಳೆದು ತಂದ ಈ ಸಣ್ಣ, ನಾಸೆತ್ತಿಕೊಂಡು ಬರುವಂಥ, ಹಲಸಿನ ಹಣ್ಣಿನ ಪರಾಕ್ರಮವನ್ನು ಮೆಚ್ಚುತ್ತಾ ಇರುವಾಗ, ಗೂಳಿಯ ಕಣ್ಣಿನ ಹತ್ತಿರವಿದ್ದ ಒಂದು ಕರಿಯ ಮಚ್ಚೆ ನನಗೆ ಪರಿಚಿತನಾದಂತೆ ನೆನಪಾಗಿ, ಕರುವಾಗಿದ್ದಾಗ ಅದನ್ನು ನಾನು ಚೆನ್ನಾಗಿ ಬಲ್ಲೆ ಎಂಬ ಒಂದು ತಿಳಿವಳಿಕೆ ಉಂಟಾಯಿತು. ಅದನ್ನು ಪ್ರಶ್ನಿಸಲು ಕುತೂಹಲಗೊಂಡೆ.

ಆದರೆ ಬಸವ ಮೂಕ ಪ್ರಾಣಿ. ಅದಕ್ಕೆ ಮಾತು ಬಾರದು. ನಾವು

ಹೇಳುವುದನ್ನು ಕೇಳಿ ತಿಳಿದುಕೊಳ್ಳುವುದಕ್ಕೆ ಅದಕ್ಕೆ ಶಕ್ತಿ ಇತ್ತೋ ಇಲ್ಲವೋ ನಾನು ನಿರ್ಧರವಾಗಿ ಹೇಳುವಹಾಗಿಲ್ಲ;—ನನಗದರ ಪರಿಚಯ ಕಡಿಮೆ. ಈರನೇನೋ ಇದರ ಸಂಗಡ ಮಾತಾಡುತ್ತಿದ್ದ. ಆದರೆ ಆತನ ಸಂಜ್ಞೆ, ಅಭಿನಯ ಮತ್ತು ನೃತ್ಯ ಇವುಗಳು ಇದಕ್ಕೆ ಅರ್ಥವಾಗುತ್ತಿದ್ದ ಹಾಗೆ ಆತನ ಮಾತುಗಾರಿಕೆ ಅರ್ಥವಾಗುತ್ತಿತ್ತೋ ಎಂದು ನನಗೆ ಸಂಶಯ. ಈರನ ಕಥಕಳಿಯನ್ನು ಎಂಥ ದಡ್ಡ ಪ್ರಾಣಿಯೂ ಅರ್ಥಮಾಡಿಕೊಳ್ಳಬಲ್ಲುದು. ಗೂಳಿ ನಮ್ಮ ಮನೆಯ ಹಸುವಿನಷ್ಟು ಚುರುಕಲ್ಲದಿದ್ದರೂ ದಡ್ಡನಲ್ಲ. ಮತ್ತು ಮಾತುಗಾರಿಕೆಯಲ್ಲಿ ಒಂದು ವಿಶೇಷ ಸೌಕರ್ಯವಿದೆ: ಕೇಳುವವನು ಅದನ್ನು ಕೇಳಿದರೂ ಸರಿಯೆ, ಬಿಟ್ಟರೂ ಸರಿಯೆ, ಅರ್ಥಮಾಡಿಕೊಳ್ಳಲಿ, ಅಪಾರ್ಥ ಮಾಡಿಕೊಳ್ಳಲಿ, ಇವೆರಡನ್ನೂ ಮಾಡಿಕೊಳ್ಳದೆಯೇ ಇರಲಿ, ನಾವು ಹೇಳುವುದನ್ನು ಹೇಳಲೇಬಹುದು. ಕೇಳುವವರು ಬುದ್ಧಿವಂತರಾದರೆ ನಮಗೆ ಎಷ್ಟು ಗೊತ್ತಿದೆಯೋ ಅಷ್ಟನ್ನು ಮಾತ್ರ ಹೇಳಿ ಬುದ್ಧಿವಂತರೆನ್ನಿಸಿಕೊಳ್ಳಬಹುದು. ದಡ್ಡರಾದರೆ ಇನ್ನೂ ಸರಿ, ನಾವು ಹೇಳುತ್ತಿರುವಾಗಲೇ ನಮ್ಮ ಬುದ್ಧಿ ಅವರ ಮಂದವಾದ ಮನಸ್ಸಿನ ಮೇಲೆ ಮಸೆದು ಮಸೆದು ಹರಿತವಾಗುತ್ತದೆ. ಹರಿತವಾದ ಬುದ್ಧಿಯನ್ನು ಮಂದವಾಗಿ ಮಾಡಿಕೊಳ್ಳುವುದಕ್ಕೆ ಮೇಧಾವಿಗಳಾದ ಶಿಷ್ಯರು ಅಥವಾ ಶ್ರೋತೃಗಳು,—ಹೀಗೆ ಮೊಂಡಾದುದನ್ನು ಹರಿತವಾಗಿ ಮಾಡಿಕೊಳ್ಳುವುದಕ್ಕೆ ಮಂದರಾದ ಶಿಷ್ಯರು ಅಥವಾ ಶ್ರೋತೃಗಳು—ವಕ್ತಾರನಿಗೆ ಇವರಿಬ್ಬರೂ ಬಹು ಪ್ರಿಯರು. ನಡುಕಲವರದೇ ತಾಪತ್ರಯ. 'ಅಜ್ಞಃ ಸುಖಮಾರಾಧ್ಯಃ' ಎಂಬ ಶ್ಲೋಕವನ್ನು ಈಗ ಜ್ಞಾಪಕಮಾಡಿಕೊಳ್ಳಿ. ನನ್ನ ಮಂದವಾದರೂ ಹರಿತವಾಗಬಲ್ಲ ಬುದ್ಧಿಗೆ ಈ ದಿನ ಈ ಗೂಳಿ ಮಾತನಾಡುವುದಕ್ಕೆ ಸಿಕ್ಕಿ ನನಗೆ ಬಹು ಹಾಯಾಯಿತು. ಆದುದರಿಂದ ನನ್ನ ಮುಂದೆ ಪ್ರಸನ್ನವಾಗಿ ಸಿಪ್ಪೆಯನ್ನು ಮೆಲ್ಲುತ್ತಾ ಕೆಂಪನೆಯ ಅಗಲವಾದ ಕಣ್ಣಿನಿಂದ ನನ್ನನ್ನು ಮಾತನಾಡಿಸುವಂತೆ ನೋಡುತ್ತಾ ನಿಂತಿರುವ ಈ ಪ್ರಾಣಿಯನ್ನು ನಾನು ಈ ರೀತಿ ಸಂಬೋಧಿಸಿದೆ.

ಅಯ್ಯಾ ಗೂಳಿ, ನೀನು ಕರುವಾಗಿದ್ದಾಗ, ನಾನು ಬಲ್ಲೆ, ನಮ್ಮ ಮಗ್ಗುಲು ಬೀದಿಯ ಅಜ್ಜಿಯ ಮನೆಯವನು ನೀನು. ನಿನ್ನ ಆಗಿನ ರೂಪವನ್ನು ನೆನೆದುಕೊಂಡರೆ ನೀನು ಒಂದು ದಿನ ಹೀಗಾಗುತ್ತೀಯ ಎಂದು ನಾವಾರೂ ಊಹಿಸಲೂ ಸಾಧ್ಯವಾಗುತ್ತಿರಲಿಲ್ಲ. ಸ್ವಾತಂತ್ರ್ಯ ಬೇಕೇ ಬೇಡವೇ ಎಂಬ ವಿಚಾರದಲ್ಲಿ ನಡೆಯತಕ್ಕ ಎಲ್ಲ ಚರ್ಚಾಕೂಟಕ್ಕೂ ನಿನ್ನನ್ನು ಕರೆದುಕೊಂಡು ಹೋಗೋಣ ಎನ್ನಿಸುತ್ತದೆ. ಆದರೆ ಎಲ್ಲಾ ಕಾಲದಲ್ಲೂ

ಇಂಥ ಹಲಸಿನ ಹಣ್ಣನ್ನು ಎಲ್ಲಿ ತರೋಣಪ್ಪ. ಅದಿರಲಿ, ನೀನು ಕರುಗಿಡ್ಡ ನಾಗಿದ್ದಾಗ ಒಂದು ದಿನ ನಾವು ಹರವಿಹಾಕಿದ ಭತ್ತವನ್ನು ತಿನ್ನುವುದಕ್ಕೆ ಬಂದೆ. ನಾನು ದೊಣ್ಣೆಯಿಂದ ನಿನ್ನನ್ನು ಚೆನ್ನಾಗಿ ದುಬ್ಬರಿಸಿ ಆಮೇಲೆ ಬಹಳ ಮರುಗಿದೆ. ಅಜ್ಜಿ ನನ್ನನ್ನು ಹೀನಾಮಾನಾ ಬೈದರು. ಆಮೇಲೆ ಆಕೆ ತೀರಿಕೊಂಡಾಗ ನಿನಗೆ ಮುದ್ರೆಯೊತ್ತಿ ನಿನ್ನನ್ನು ಬೀದಿಗೆ ಬಿಟ್ಟರು. ನೀನು ಬಸವನಾದೆ. ಕೆಲಕಾಲ ನಿನ್ನ ಸುಳಿವು ನಮಗೆ ಸಿಕ್ಕಲಿಲ್ಲ. ಈಗ ನೋಡಿದರೆ ಗುರುತೇ ಸಿಕ್ಕದ ಹಾಗೆ ಆನೆಯಂತೆ ಕೊಬ್ಬಿ ನಮ್ಮನ್ನೆಲ್ಲಾ ಹೆದರಿಸುತ್ತಾ ನಮ್ಮ ಊರಿನ ತುರು ಹಿಂಡಿನ ಜೊತೆಯಲ್ಲಿ ಏಕಮಾತ್ರ ನಾಯಕನಾಗಿ ತಿರುಗುತ್ತಿದ್ದೀಯ. ಆ ನೋವಿನ ನೆನಪೇನಾದರೂ ಈಗ ನಿನಗಿದ್ದರೆ ಈ ಹಲಸಿನ ಹಣ್ಣಿನ ಸಿಪ್ಪೆಯ ಭೋಜನದಲ್ಲಿ ಅದನ್ನು ಮರೆತು ನನ್ನಲ್ಲಿ ಸ್ನೇಹಪರನಾಗು ಎಂದೆ

ಇಷ್ಟು ದೀರ್ಘ ಭಾಷಣವನ್ನು ಬಸವ ಅರ್ಥಮಾಡಿಕೊಂಡ ಹಾಗೆ ತೋರಲಿಲ್ಲ. ಈ ಮಾತಿನ ರೀತಿ ಅದಕ್ಕೆ ತೀರ ಅಪರಿಚಿತ. ಅದು ಸುಮ್ಮನೆ ಸಿಪ್ಪೆ ಮೆಲ್ಲುವುದನ್ನು ನಿಲ್ಲಿಸಿ ನನ್ನನ್ನು ನೋಡಿತು. ಆಮೇಲೆ ಒಂದು ತೆರದಲ್ಲಿ ಕೊರಳನ್ನಾಡಿಸಿತು. ಎಲಎಲ ಇದು ಕೌಲೆಯ ಬಸವನ ಸನ್ನೆಯಂತಿದೆ ಯಲ್ಲಾ, ಇದಕ್ಕೆ ಎಂದಾದರೂ ಆ ಶಿಕ್ಷಣ ದೊರೆತಿತ್ತೋ ಎಂಬ ಸಂದೇಹ ನನಗೆ ಉಂಟಾಗಿ ಅದನ್ನು ನೀನು ಎಂದಾದರೂ ಕೌಲೆಯ ರಾಮನಾಗಿದ್ದೆಯಾ ಎಂದೆ.

ಬಸವ ಸ್ವಲ್ಪ ಅಪ್ರತಿಭನಾಯಿತು ಎಂದು ಹೇಳಬೇಕು. ಅದರ ನೆನಪು ಕುದುರಿರಬಹುದು. ಕೌಲೆಯ ರಾಮನೆಂದುದಕ್ಕೆ ಅದಕ್ಕೆ ಸ್ವಲ್ಪ ನಾಚಿಕೆ ಯಾಯಿತೋ ಏನೋ; ಇಲ್ಲವೆಂದು ಸಂಜ್ಞೆ ಮಾಡಿತು. ಆದರೆ ಈ ಸನ್ನೆ ಯನ್ನು ಅದು ಮಾಡಿದ ರೀತಿ ನನ್ನ ಸಂದೇಹವನ್ನು ದೃಢಪಡಿಸಿ ಕೆಲವು ದಿನಗಳ ಹಿಂದೆ ಕೆರೆಯಲ್ಲಿ ನನ್ನ ಗೆಳೆಯರು ಮಾತಾಡುತ್ತಿದ್ದ ಸಂಗತಿಗಳು ಜ್ಞಾಪಕಕ್ಕೆ ಬಂದುವು. ಇದು ಕೌಲೆಯ ಬಸವನಾಗಿ ಊರೂರನ್ನು ಸ್ವಲ್ಪ ಕಾಲ ತಿರುಗಿದ್ದು ನಿಜ, ಆ ಅಭಿನಯ ಶಿಕ್ಷೆ ಇದಕ್ಕೆ ದೊರೆತಿತ್ತು. ಸ್ವಲ್ಪ ತಿಂದಿಪೋತ; ಅಕ್ಕಿ ತೆಂಗಿನಕಾಯಿ ಬೆಲ್ಲ ಇವುಗಳ ರುಚಿಯನ್ನು ತೋರಿಸಿ ಇದನ್ನೊಬ್ಬ ನಮ್ಮೂರಿನಿಂದ ಪುಸಲಾಯಿಸಿ ಸೆಳೆದೊಯ್ದಿದ್ದ. ನನ್ನ ಗೆಳೆಯ ನೊಬ್ಬ ಪರವೂರಲ್ಲಿ ಇದು ಕೌದಿ ಹೊದೆದುಕೊಂಡು ಗೀತೆಯ ಜತೆಗೆ ಹಸೆ ನಿಂತುದನ್ನು ಕಂಡನಂತೆ. ಇದೂ ಅವನನ್ನು ಆ ಗುಂಪಿನಲ್ಲಿ ಗುರುತಿಸಿತಂತೆ. ಅವನನ್ನು ಕಂಡಕ್ಷಣ ಈ ಊರಿನ ಕಣಿವೆ ಮೇಡಿನ ಗೀಳು ಇದಕ್ಕೆ ಹಿಡಿದು

ಕೌಲೆಬಸವನಾಟದವನ ಕೈಯಿಂದ ಹೇಗೊ ತಪ್ಪಿಸಿಕೊಂಡು ಮೂರನೆಯ ದಿನವೇ ಇಲ್ಲಿಗೆ ಬಂದಿತಂತೆ. ಇದು ಕಾಣದೆ ಹೋದಾಗ ಬಿಮ್ಮೆಂದ ಊರು ಇದು ಬಂದಮೇಲೆ ತುಂಬಿದಂತಾಗಿ ಊರವರಿಗೆಲ್ಲಾ, ಅದರ ಮೇಲೂ ಇದು ಕಿರುಬನನ್ನು ತಿವಿದೆತ್ತಿ ಹಾಕಿ ಬಂದ ಬಳಿಕ, ಇದರ ಮೇಲೆ ಬಹು ಮಮತೆ ಉಂಟಾಗಿ, ಇದರ ತುಂಟತನ ಹೆಚ್ಚಿದೆಯಂತೆ. ಇವೆಲ್ಲಾ ನನ್ನ ನೆನಪಿಗೆ ಬಂದಾಗ ನನಗೆ ಇದರ ವಿಷಯದಲ್ಲಿ ಗೌರವವುಂಟಾದರೂ ಭಯ ಮುಕ್ಕಾಲು ಪಾಲು ಹಾರಿಹೋಯಿತು.

ಗೂಳಿ ಸುಧಾರಿತನಲ್ಲದಿದ್ದರೂ ಶಿಕ್ಷಿತ! ಮನುಷ್ಯನ ಮಹತ್ವ ಇದಕ್ಕೆ ಸ್ವಲ್ಪವಾದರೂ ತೋರಿರಬೇಕು. ನಮ್ಮಲ್ಲಿ ಇಂಗ್ಲಿಷ್ ಬಲ್ಲವರೊಡನೆ ಆಂಗ್ಲರು ವರ್ತಿಸುವಂತೆ ನಾನು ಇದರ ಕೂಡ ವರ್ತಿಸಬಹುದೆಂದುಕೊಂಡು, ಕುಕ್ಕರಗಾಲಿನಲ್ಲಿ ಕುಳಿತಿದ್ದವನು ಪದ್ಮಾಸನ ಹಾಕಿ ಕುಳಿತೆ. ಅದು ಇಲ್ಲ ಎಂದ ರೀತಿಗೆ ನಾನು ಮೆಚ್ಚದಿರಲಿಲ್ಲ. ನಾಚಿಕೆ ಪಶುವಿನಲ್ಲಿಯೂ ಒಂದು ದೊಡ್ಡ ಗುಣ. ಪುಣ್ಯಕೋಟಿಯ ವಂಶದವನಾಗಿ ಸುಳ್ಳು ಹೇಳಬಾರದಪ್ಪಾ ಎಂದು ನೀತಿ ಹೇಳುವಷ್ಟು ಧೈರ್ಯ ಆಗ ನನಗೆ ಬಂದಿತು. ಆದರೂ ಎಲ್ಲಿಯಾದರೂ ರೇಗಿಯಾನು ಎಂದು ಇನ್ನೂ ಮೂರು ನಾಲ್ಕು ಕೀತುಗಳನ್ನು ಆದರ ಬಳಿಗೆಸೆದು ಅದು ಮೆಲ್ಲುತ್ತಿರುವ ಅಂತರದಲ್ಲಿ ಹೀಗೆ ನೀತಿಬೋಧೆಗೆ ಪ್ರಾರಂಭಿಸಿದೆ.

ಅಯ್ಯಾ ನೀನು ಪುಣ್ಯಕೋಟಿಯ ವಂಶದವನು, ಸುಳ್ಳು ಹೇಳಬಾರದಪ್ಪಾ. ಪುಣ್ಯಕೋಟಿ ಯಾರು ಎಂದಾದರೂ ನಿನಗೆ ಗೊತ್ತಿದೆಯೇ ? ಆಕೆ ನಮ್ಮ ನಚಿಕೇತನಿಗೆ ಸಮಾನಳು. ಆಕೆಯ ಕತೆಯನ್ನು ಹೇಳಿದ ಕವಿ ಆ ಉಪನಿಷದೃಷಿಗೆ ಕಡಿಮೆಯಾದವನಲ್ಲ. ಮುಂದೆ ಬರಲಿರುವ ಮಾನವನ ಬಾಳುವೆಯ ದಾರಿಗೆ ಕೈಮರದಂತಿದ್ದಾಳೆ ಆಕೆ. ನೀನು ಆಕೆಯ ವಂಶದವನು. ಅಕ್ಕಿ ಕಾಯಿ ಬೆಲ್ಲದುಂಡೆಯ ರುಚಿಯೇನೋ ಕೆಟ್ಟದ್ದಲ್ಲ. ಆದರಿಂದ ನೀನು ನಿನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡೆಯಲ್ಲಾ ಅದು ಕೆಟ್ಟದ್ದು. ಇದಕ್ಕೆ ನೀನು ನಾಚಿಕೊಳ್ಳುವುದೂ ಭೂಷಣವೇ. ನೀನು ಚೇತರಿಸಿಕೊಂಡು, ಈ ಊರಿಗೆ ಬರುವ ಹಿರಿಯಾಸೆಯ ಸೆಳೆತಕ್ಕೆ ಸಿಕ್ಕಿ ನಿನ್ನ ಬಿಡುಗಡೆಯನ್ನು ಸಾಧಿಸಿಕೊಂಡೆಯಲ್ಲಾ ಅದು ಮೆಚ್ಚತಕ್ಕದ್ದು—ಅನುಕರಣೀಯ. ಈಗ ನಿಜವಾಗಿ ನೀನು ನಿನ್ನ ಗುರುತ್ವವನ್ನು ಸಂಪಾದಿಸಿಕೊಂಡೆ. ಅವರ ಜತೆಯಲ್ಲಿದ್ದಾಗ ನೀನು ಬಹು ಕಷ್ಟಪಟ್ಟಿರಬೇಕು. ಚಾವಟಿ ಏಟುಗಳನ್ನು ಬಹಳ ತಿಂದಿರಬೇಕು. ನಿನ್ನ ಜತೆಗೆ ಆ ಸೀತೆಯಿಲ್ಲದಿದ್ದರೆ, ದಂಡಕಾರಣ್ಯದ

ಋಷ್ಯಾಶ್ರಮಗಳಂತೆ ಊರೂರಿನ ಕೆಲವು ಮನೆಗಳಲ್ಲಿ ಅಲ್ಪಸ್ವಲ್ಪ ಅಕ್ಕಿ ಬೆಲ್ಲ ಬಾಳೆಯ ಹಣ್ಣಿನ ಭೋಗ ಸಿಕ್ಕದಿರದಿದ್ದರೆ, ನೀನು ಬದುಕುತ್ತಿದ್ದೆಯೋ ಇಲ್ಲವೋ. ಆ ಮುಗ್ಧರಿಗೆ ನೀನು ರಾಮ-ನಂದಿ-ದೇವರು. ಕೌಲೆಯ ಬಸವ ನಾಟಕದವನಿಗೆ ನೀನು ಕಿಂಕರ—ಉಪಯೋಗಿವಸ್ತು—ಅವನ ಕುಶಲತೆಯ ನಟನಕ್ಕೆ ನೀನು ಒಂದು ನೆಪ ಮಾತ್ರ;—ಮೇವು ಸಿಕ್ಕದಾಗ ಬರಿ ತೊಂಡು ದನ. ಅವರವರ ಭಾವನೆಯಿದ್ದಷ್ಟು ನೀನು ಹಿರಿಯವ, ಅವರವರ ಉಪಯೋಗವಿದ್ದಷ್ಟು ನೀನು ಕಿರಿಯವ. ನಮ್ಮೂರ ಈರನಿಗೆ ನಿನ್ನನ್ನು ಕಂಡರೆ ಅಷ್ಟು ಗೌರವವಿಲ್ಲ. ನಿನಗೆ ಕೊಟ್ಟುದನ್ನು ಆತ ಕಳುವು ಮಾಡಿ ತಿನ್ನುತ್ತಾನೆ. ಆದರೆ ಮೇಗಣ ಕೇರಿಯ ಮುದುಕಿ ನೋಡು, ಸಂಕ್ರಾಂತಿಯ ದಿನ, ನಿನ್ನ ಕೊಂಬಿಗೆ ಹೂವನ್ನು ಸುತ್ತಿ, ಅರಿಸಿನ ಕುಂಕುಮವಿಟ್ಟು, ಬಾಳೆಯ ಹಣ್ಣನ್ನು ತಿನ್ನಿಸಿ ಎಷ್ಟೊಂದು ಭಾವಿಸಿದಳು. ಈರ ಹತ್ತಿರವಲ್ಲಿ ಇರದಿದ್ದರೆ ನೀನು ಆಕೆಯನ್ನು ತಿವಿಯುತ್ತಿದ್ದೆಯೇನೋ. ತಿವಿಯುತ್ತಿರಲಿಲ್ಲ, ಬಿಡು; ಪೂಜೆಗೊಳ್ಳುವುದು ನಿನಗೆ ಸ್ವಲ್ಪ ಅಭ್ಯಾಸವಾಗಿದೆ. ಪಾಪ, ಆಕೆಗೆ ದೇವರೆಂಬ ಗೌರವದ ಜತೆಗೆ ಪ್ರಾಣಿ ಎಂಬ ಭಯವೂ ಇತ್ತಪ್ಪಾ. ನನಗೂ ನಿನ್ನನ್ನು ಕಂಡರೆ ಬಹಳ ಮರ್ಯಾದೆ ಇದೆ. ನಿನ್ನ ನಾಡಪ್ರೇಮ ನನ್ನನ್ನು ನಾಚಿಸುವಂತಿದೆ. ನಿನ್ನ ಸ್ಥಿತಿಯಲ್ಲಿದ್ದರೆ ನಾನು ಕೌಲೆಯ ರಾಮನಾಗಿಯೇ ಬಾಳನ್ನು ನೀಗುತ್ತಿದ್ದೆ—ಪುಡಿಮಾಸಿಗೆ ಆಸೆಪಟ್ಟು ಕೆರೆಯ ತೂಬನ್ನು ಒಡೆದ ದಡ್ಡನ ಹಾಗೆ. ನೀನು ಈ ವಿಷಯದಲ್ಲಿ ನನಗಿಂತ ತೀರ ಜಾಣ, ಭವ್ಯದರ್ಶಿ, ಧೈರ್ಯಶಾಲಿ. ತುರುಹಿಂಡಿನ ಜತೆಯಲ್ಲಿ ನಮ್ಮೂರಿನ ಸೂಜಿಕಲ್ಲು ಮಂಟಿಯ ಬಂಡೆ ಬುಡದ ಹುಲ್ಲನ್ನು ಮೆಲ್ಲುವ ಸುಖ ನಿನಗೆ ತಕ್ಕ ಗೌರವ. ನಿನ್ನ ರೂಪಿನಿಂದಲೂ ಗುಣದಿಂದಲೂ, ನೀನು ಚೆಲುವರಾಯನ ಹಾಗೆ ಸರ್ವಪ್ರಿಯ. ನನಗಂತೂ ತೀರ ಬೇಕಾದವ, ಬಹು ಪ್ರಿಯ. ಇಕೋ, ಈ ಕೇತಿನಲ್ಲಿ ಸ್ವಲ್ಪ ತೊಳೆಗಳನ್ನು ಉಳಿಸಿದ್ದೇನೆ ಮೆಲ್ಲು ಎಂದು ಪ್ರೀತ್ಯಾವೇಶದಲ್ಲಿ ಅರ್ಧ ತೊಳೆಯುಳ್ಳ ಕೇತನ್ನೇ ಅದರ ಮುಂದಕ್ಕೆ ಎಸೆದುಬಿಟ್ಟೆ.

ಬಸವ ಆಗ ನನಗೆ ನಿಜವಾಗಿ ಬಲು ಚೆಲುವಾಗಿ ಕಂಡಿತು: ತುಂಬಿದ ಮೈ, ಶಿಖರದಂತಿದ್ದ ಹಿಳಿಲು, ನಂದಿಯಂಥ ಮುಖ, ದರ್ಪವನ್ನು ತೋರುವ ಆದರೆ ಕ್ರೌರ್ಯವನ್ನು ತೋರದ ಅಗಲವಾದ ಕಣ್ಣು, ಕರಿ ನೀಲಿಯಾಕಾಶ ದಿಗಂತಕ್ಕೆ ಜಾರಿ ಬರುವಾಗ ಒಂದು ತೆರದ ಬೂದು ಬಿಳುಪಾಗುವ ಹಾಗೆ ಬಣ್ಣ,—ಈ ಅದರ ಇತಿಹಾಸ; ಆ ಮುದುಕಿಯ ಹಾಗೆ ನನಗೂ ಇದಕ್ಕೆ ಅರಿಸಿನ ಕುಂಕುಮವಿಟ್ಟು ಬಾಳೆಹಣ್ಣನ್ನು ಮೆಲ್ಲಿಸೋಣ ಅನ್ನಿಸಿತು.

ಆದರ ಹಿಳಿಲನ್ನು ಮುಟ್ಟಿ ನೋಡಬೇಕೆಂಬ ಆಸೆಯೂ ಹುಟ್ಟಿತು. ಆದರೆ ಧೈರ್ಯ ಬರಲಿಲ್ಲ. ಈ ಸ್ನಿಗ್ಧ ಭಾವದಿಂದ ಅದನ್ನು ನೋಡುತ್ತಿರುವ ಸುಖ ಎಷ್ಟೋ ಅಷ್ಟೆ ನನಗೆ, ಎಂದುಕೊಳ್ಳುತ್ತಿರುವಾಗ ಬಸವ ಕೀತಿನ ಜೊತೆಗೆ ತೊಳೆಗಳೂ ಸಿಕ್ಕಿ ಆನಂದವಾಗಿ ನನ್ನನ್ನು ಬಹು ಸ್ನೇಹದಿಂದ ನೋಡಿತು. ನನ್ನ ಹೊಗಳಿಕೆಯೂ ಅದರ ಮನಸ್ಸಿಗೆ ತಟ್ಟಿರಬೇಕು.

ಅದು ತಾನು ಮೆಲ್ಲುತ್ತಿರುವ ಕೀತನ್ನೂ ಆಮೇಲೆ ನನ್ನನ್ನೂ ನೋಡಿದ ಭಾವ ಕೌತುಕವನ್ನು ತರುವಂಥಾದ್ದು. ಪ್ರತಿಯಾಗಿ ಮಾತನಾಡದೆ ನನ್ನ ಮಾತನ್ನು ಮಾತ್ರ ಆಸಕ್ತಿಯಿಂದ ಕೇಳುವವರಿಗೆ ನಾನು ಎಷ್ಟುಹೊತ್ತು ಬೇಕಾದರೂ ಮಾತನಾಡಬಲ್ಲೆನೆಂದು ಈ ವೇಳೆಗೆ ನನ್ನ ಸ್ನೇಹಿತರಿಗೆ ಹೇಗೋ ಹಾಗೆಯೇ ಈ ಬಂಧವನ್ನೋದುವವರಿಗೂ ತಿಳಿದಿರಬಹುದು. ನನ್ನನ್ನು ಯಾವುದೋ ವಿಚಾರವಾಗಿ ಪ್ರಶ್ನಿಸಬೇಕೆಂದು ಈ ಗೂಳಿಗೆ ಕುತೂಹಲ ಎಂದು ಆ ದೃಷ್ಟಿಯನ್ನು ನಾನು ಹೀಗೆ ಅರ್ಥಮಾಡಿಕೊಂಡೆ.—“ಎಲ ಎಲ, ನಾನಿವನು ಕೆಲಸಕ್ಕೆ ಬಾರದವನು ಎಂದು ಅಸಡ್ಡೆ ಮಾಡಿದ್ದೆ ; ಆ ರಾಮು ನಂಗಡಿಯಿಂದ ಈತ ಈ ಹಣ್ಣನ್ನು ಎಷ್ಟು ಸುಲಭವಾಗಿ ತಂದುಬಿಟ್ಟ. ಅಲ್ಲಿ ನಾನು ಮೂರುಸಲ ಮುಸುಡಿ ಹಾಕಿ ಐದು ಏಟನ್ನು ತಿಂದೆ. ಐದಾರು ದ್ವಿಪಾದಗಳು ಅವನ ಹತ್ತಿರ ಏನೇನೋ ಕಿಚಿಪಿಚಿ ಆಡುತ್ತಾ ಹಲ್ಲು ಕಿರಿಯುತ್ತಾ ಅಂಗಚೇಷ್ಟೆಗಳನ್ನು ಮಾಡುತ್ತಾ ಈ ಹಲಸಿನ ಹಣ್ಣಿಗೆ ಕೈಯಿಕ್ಕಿ ಕೈಯಿಕ್ಕಿ ತಿರುಗಿ ಅಂಗಡಿಯಲ್ಲೇ ಬಿಟ್ಟುಹೋದರೂ ಈ ನರಪೇತಲ ಒಂದು ಗಳಿಗೆಯಲ್ಲಿ ತುಸುವೂ ಕಿತ್ತಾಟವಿಲ್ಲದೆ ತಂದುಬಿಟ್ಟನಲ್ಲಾ—ಏನು ಮಾಟ ಮಾಡಿದನೊ ಕಾಣೆ” ಎಂಬ ಬೆರಗಿನ ಭಾವ ಅದಿರಬೇಕು.

ನನ್ನ ಮತ್ತು ರಾಮುನ ಈ ವ್ಯವಹಾರವನ್ನು ಗೂಳಿ ತಿಳಿದುಕೊಳ್ಳುವ ಹಾಗೆ ಹೇಳಬೇಕೆಂದು ನನಗೇನೋ ಆಸೆ. ನಾನು ಸ್ವಲ್ಪ ಕೇರಳಕ್ಕೆ ಹೋಗಿ ಕಥಕಳಿಯನ್ನು ಕಲಿತಿದ್ದರೆ ಚೆನ್ನಾಗಿತ್ತು. ಒಂದು ಪಕ್ಷ ಕಲಿತಿದ್ದರೂ ಅದು ಇಲ್ಲಿ ಹೇಗೆ ಉಪಯೋಗಕ್ಕೆ ಬಂದೀತು. ಏಕೆಂದರೆ ನಾನು ರಾಮುನನ್ನು ಎರಡಾಣೆಗೇ ಒಪ್ಪಿಸಿ ಹಣ್ಣು ತಂದ ಬಗೆ ಒಂದು ಕಲೆಯಾದರೂ ವ್ಯಾಪಾರ ಒಂದು ಶಾಸ್ತ್ರ, ಸೈನ್ಸ್—ಕಲೆಯಲ್ಲ. ಸೈನ್ಸಿಗೂ ಕಲೆಗೂ ಒಂದು ಮುಖ್ಯ ವ್ಯತ್ಯಾಸವಿದೆ, ಇದನ್ನು ನೀವು ಗಮನಿಸಿರುವಿರೋ ಇಲ್ಲವೋ. ಗಾನದಿಂದಾಗಲಿ, ನೃತ್ಯದಿಂದಾಗಲಿ, ಅಭಿನಯದಿಂದಾಗಲಿ, ಸನ್ನೆಯಿಂದಾಗಲಿ ಅದನ್ನು ನೀವು ತಿಳಿಯಹೇಳುವುದಕ್ಕಾಗುವುದಿಲ್ಲ. ಅಷ್ಟೇ ಏಕೆ, ನಮ್ಮ ಈ ತಾಯಿ ನುಡಿಯಲ್ಲಿಯೇ ಅದನ್ನು ಕಲಿಸುವುದು ಕಷ್ಟವೆಂದ ಮೇಲೆ, ಇನ್ನು ನೃತ್ಯಾಭಿ

ನಯನಗಳ ಮೂಕಭಾಷೆಯ ಮಾತೇನು ? ಇದು ಸ್ಪೈಸ್‌ನ ವೈಶಿಷ್ಟ್ಯ. ನಮ್ಮ ದಕ್ಷಿಣ ಭಾರತೀಯ ಸಂಗೀತ ಗಣಿತಶಾಸ್ತ್ರವನ್ನೂ ಕೇರಳದ ಕಥಕಳಿ ತರ್ಕಶಾಸ್ತ್ರವನ್ನೂ ಅರಿಯಿಸಬಲ್ಲನೆಂದು ಪ್ರತೀತಿಯೇನೋ ಉಂಟು. ವಿದ್ಯಾರ್ಥಿಗಳು ಇದನ್ನೆಲ್ಲಾದರೂ ನಂಬಿ ತಮ್ಮ ಪಠ್ಯ ಪುಸ್ತಕಗಳನ್ನು ಅಸಡ್ಡೆಮಾಡಿಯಾರು, ಜೋಕೆ. ಕಲೆಯ ಭಾವವನ್ನು ಯಾವುದರ ಮೂಲಕವಾದರೂ ತಿಳಿಸಬಹುದು. ಸ್ಪೈಸಿನ ತಿಳಿವಳಿಕೆಗೆ ಮಾತೇ ಬೇಕು. ಇದೊಂದು ಸ್ಪೈಸ್‌ನ ಹಿರಿಮೆ. ಹಲಸಿನ ಹಣ್ಣು ಬಹಳ ರುಚಿ ಎಂಬುದನ್ನು ಗೂಳಿಯು ಮುಂದೆ ಎರಡು ಹನುಮಂತನ ಜೆಸಕೆ ಹಾಕಿ ನಮಗೆ ಮುದದ ಮದವೇರಿದ ಭಾವದಿಂದ ತೋರಿಸಬಹುದು. ಎರಡಾಣೆ ಕೊಟ್ಟು ಅದನ್ನು ಕಿತ್ತಾಡದೆ ತಂದ ಸೌಮ್ಯ ಸಮಾಜಶಾಸ್ತ್ರವನ್ನು ಮಾತಿನಿಂದಲ್ಲದೆ ಮತ್ತಾವ ಬಗೆಯಲ್ಲಿ ಹೇಳೋಣ. ವಿಧಿಯಿಲ್ಲದೆ ನಾನು ತಿರುಗಿ ಈ ರೀತಿ ಮಾತಿಗೆ ಪ್ರಾರಂಭಿಸಿದೆ—

"ಎಲಾ ಸ್ನೇಹಿತ, ನಿನ್ನ ಭಾವ ನನಗೆ ಅರ್ಥವಾಯಿತು. ನನ್ನ ಮಾತು ನಿನಗೆ ತಿಳಿಯುತ್ತದೆಯೋ ಇಲ್ಲವೋ ಗೊತ್ತಿಲ್ಲ. ಅರ್ಥಶಾಸ್ತ್ರ ಕಡು ಕಷ್ಟವಾದ ಶಾಸ್ತ್ರ. ಅದು ನನಗೇ ತಿಳಿದಿಲ್ಲ. ಆದರೆ ನಿನಗೆ ಹೇಳುತ್ತಾ ನನಗೆ ಅದು ಅರ್ಥವಾಗಬಹುದು. ಆದುದರಿಂದ ಹೇಳುತ್ತೇನೆ. ಕೇಳುವಷ್ಟು ಕೇಳಿ ತಿಳಿದುಕೊಳ್ಳುವಷ್ಟು ತಿಳಿದುಕೊ. ಈ ಎರಡು ಮೂರು ಕೀತ್ರುಗಳು ಮುಗಿಯುವವರೆಗೂ ನಿನಗೂ ಪುರಸತ್ತು, ನನಗೂ ಅಷ್ಟು ಕೆಲಸವಿಲ್ಲ. ದೇವಸ್ಥಾನದ ಪೊಂಗಲೂ ತೇಂಗೊಳಲೂ ತಪ್ಪಿಹೋಗಬಹುದು, ಹೋದರೆ ಹೋಗಲಿ, ನಿನ್ನ ಹಾಗೆ ಬುದ್ಧಿಗೆ ಉದ್ದೀಪಕರಾದ ಶ್ರೋತೃಗಳು ನನಗೆ ಸಿಕ್ಕುವುದು ಅಪೂರ್ವ. ನಿನ್ನಂಥ ಬೃಹದ್ವಸ್ತು, ನನ್ನ ಮನೆಗೆ ಬಂದು ಉಪಹಾರ ಸ್ವೀಕರಿಸಿ ನಾನು ಹೇಳುವುದನ್ನು ಕೇಳುತ್ತಿರುವುದು ಅಲ್ಪ ಭಾಗ್ಯವಲ್ಲ. ಆದುದರಿಂದ ಹತ್ತಿರ ಬಾ—ಲಾಲಿಸು ಈ ಆಧ್ಯಾತ್ಮಿಕ ಅರ್ಥಶಾಸ್ತ್ರೋಪನಿಷತ್ತನ್ನು" ಎಂದು ಪೀಠಿಕೆಯೊಡನೆ ಈ ರೀತಿ ಮೊದಲುಮಾಡಿದೆ.

"ಅರ್ಥಶಾಸ್ತ್ರದ ತಳಹದಿಯಲ್ಲಿ ಅಧ್ಯಾತ್ಮಶಾಸ್ತ್ರವಿದೆಯಪ್ಪ ವೃಷಭರಾಜ. ರಾಮು ನನ್ನಂತೆ ದ್ವಿಪಾದವಸ್ತು. ಅದಕ್ಕೆ ದೇಹವೊಂದುಂಟು, ಆತ್ಮವೊಂದುಂಟು. ಈ ಆತ್ಮ ಉಂಟೇ ಇಲ್ಲವೇ, ಯಾರಾರಲ್ಲಿ ಎಷ್ಟೆಷ್ಟುಂಟು, ಎಷ್ಟೆಷ್ಟಿಲ್ಲ; ಇದ್ದರೆ ಇದರ ಸ್ವರೂಪವೆಂಥಾದ್ದು, ಚೇಷ್ಟೆ ಎಂಥಾದ್ದು, ಗಾತ್ರವೆಷ್ಟು; ದೇಹದಲ್ಲಿದ್ದರೆ ಯಾವ ಅಂಗದಲ್ಲಿದೆ; ನಿನ್ನಂಥ ಪ್ರಾಣಿಗಳಲ್ಲಿಯೂ ಇದೆಯೇ ಇಲ್ಲವೇ; ಇದು ಒಂದೇ ಅನೇಕವೇ, ವಿಭುವೇ ಅಲ್ಲವೇ, ಪ್ರಭುವೇ ಅಲ್ಲವೇ, ಈ ವಿಚಾರದಲ್ಲಿ ಮನುಜಕುಲಕ್ಕೆ ಬಹು ಕುತೂಹಲ. ಉಸಿರಾಡು

ವಿಕೆಯಿಂದ ನಾವು ಹೇಗೆ ಒಂದು ಪ್ರಾಣಿಯನ್ನು ಜೀವಂತವೆಂದು ತಿಳಿದುಕೊಳ್ಳುತ್ತೇವೆಯೋ ಹಾಗೆಯೇ ಆಸೆಬೇಸರಗಳ ಶ್ವಾಸೋಚ್ಛ್ವಾಸಗಳಿಂದ ಎಲ್ಲ ಪ್ರಾಣಿಗಳ, ಮುಖ್ಯ ನಮ್ಮ ಕುಲದ ಆತ್ಮವಂತಿಕೆಯನ್ನು ನಾವು ಗುರುತಿಸುತ್ತೇವೆ. ಮಹತ್ತಾದ ಆಸೆ ಬೇಸರಗಳುಳ್ಳವನು ಮಹಾತ್ಮ—ನಿರಾಶನು ಅನಾತ್ಮ. ದಿಗಿಲುಪಡಬೇಡ—ನೀನು ಆತ್ಮವಂತ;—ನಿನ್ನನ್ನು ರಾಮು ಎಷ್ಟು ಸಲ ಅಟ್ಟಿದರೂ ಈ ಹಣ್ಣಿನ ವಿಚಾರದಲ್ಲಿ ನೀನು ನಿರಾಶನಾಗಲಿಲ್ಲ. ಇಷ್ಟು ಸಾಕು ನಿನ್ನ ಆತ್ಮವಂತಿಕೆಗೆ. ಆದರೆ ಹೀಗೆ ಕರೆಯಿಸಿಕೊಳ್ಳದೆ, ಕರೆದವರ ಅಂತಸ್ತು ಎಷ್ಟು ಎಂದು ಭಾವಿಸದೆ, ಈ ಸಣ್ಣ ಹಲಸಿನ ಹಣ್ಣಿನ ಎಳೆತಕ್ಕೆ ಸಿಕ್ಕಿ ನನ್ನ ಮನೆಗೆ ಬಂದೆಯಲ್ಲಾ—ನಿನ್ನಾತ್ಮ ನನ್ನದಕ್ಕಿಂತ ಈ ವಿಷಯದಲ್ಲಿ ಲಘು. ಮಾತು ಎಲ್ಲಿಗೊ ಹೋಯಿತಲ್ಲಾ—ತಿಳಿವಳಿಕೆ ಹೆಚ್ಚಾದರೆ ಈ ರೀತಿ ಕಾಡು ಮೇಯುವುದಕ್ಕೆ ಹೋಗುತ್ತದೆ ಬುದ್ಧಿ. ನಮ್ಮ ಪ್ರಾಣಕ್ರಿಯೆ ನಮ್ಮ ದೇಹದಲ್ಲೆ ಇರುವ ಶ್ವಾಸಕೋಶದಿಂದ ನಡೆಯುತ್ತದೆ. ರಾಗಭೋಗವಿರಾಗಾತ್ಮಕವಾದ ಪೂರಕಕುಂಭಕರೇಚಕ ಕರ್ಮವುಳ್ಳ ಆತ್ಮಕ್ರಿಯೆ ಅರ್ಥಕೋಶದ ಮೂಲಕ ನಮಗೆ ನಡೆಯಬೇಕಾಗಿದೆ. ನಿನಗೆ ಈ ಅಂಗವಿಲ್ಲ. ನಿನ್ನಾತ್ಮಸ್ಥಿತಿ ಮೇಲು ಗಾಳಿಯನ್ನು ಶ್ವಾಸಿಸಲಾರದಿದ್ದರೂ ನೀರಿನಲ್ಲಿ ಜೀವಂತವಾಗಿರುವ ಮೀನಿನಂತಿದೆ.

ನಮ್ಮಲ್ಲಿ ಬಹುಭಾಗದವರಿಗೆ ಈ ಅಂಗ ಸುಷ್ಮುವಾಗಿ ಆರೋಗವಾಗಿ ದೊರೆತಿಲ್ಲ. ನಾವು ಅನೇಕರು ಈ ಕೋಶವನ್ನು ಅದು ಇರಬೇಕಾದ ಹಾಗೆ ಪಡೆಯದೆ, ಆಮೆಯಂತೆ, ಕಪ್ಪೆಯಂತೆ, ತಿಮಿಂಗಿಲದಂತೆ ಇನ್ನೂ ಅರ್ಧ ನೆಲ ಅರ್ಧ ಜಲ ಜೀವಿಗಳಾಗಿದ್ದೇವೆ ಈ ಆತ್ಮವಿಚಾರದಲ್ಲಿ. ಜಲಚರವಾದದ್ದು ಸ್ಥಲಚರವಾಗುವುದಕ್ಕೆ ಎಷ್ಟು ಕಷ್ಟಪಟ್ಟಿರಬೇಕು, ಎಷ್ಟು ಕಾಲ ಎಷ್ಟು ಸಾವು ನೋವುಗಳನ್ನು ಅನುಭವಿಸಿ ನಾವೆಲ್ಲ ಈ ರೂಪವನ್ನೂ ಅಂಗಸಂಪತ್ತಿಯನ್ನೂ ಪಡೆದೆವು ನೋಡು. ಈ ನಿನ್ನ ದೇಹ—ಹೀಳಲು—ಗೊರಸು—ಬಾಲ—ಕೊಂಬು ನಿನ್ನ ಪೂರ್ವಾರ್ಜಿತ ಕರ್ಮಫಲ, ನನ್ನದೂ ಹಾಗೆಯೇ. "ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವಚಾರ್ಜುನ ತಾನ್ಯಹಂ ವೇದ ಸರ್ವಾಣಿ, ನ ತ್ವಂವೇತ್ಥ ಪರಂತಪ."

ಅವರವರ ಆಸೆಯಂತೆ ಅವರವರ ವೇಶ! ಹಾಗೆಯೇ ಮಾನವ ಕುಲ ಸುಷ್ಮು ಕುಶಲ ಅರ್ಥಕೋಶವನ್ನು ಪಡೆದು ಆತ್ಮವಂತವಾಗುವುದಕ್ಕೆ ಬಹು ಕಾಲದಿಂದ ಶ್ರಮಿಸುತ್ತಿದೆ. ಇದನ್ನು ಸಾಧಿಸುವವರೆಗೂ ಅದಕ್ಕೆ ನೆಮ್ಮದಿಯಿಲ್ಲ. ಲೋಕ ಇದುವರೆಗೆ ನಡೆದು ಬಂದಿರುವುದು ಈ ಕೋಶವನ್ನು

ಪೂರ್ಣರೂಪದಲ್ಲಿ ನೀರೋಗವಾಗಿ ಪಡೆದ ಅಲ್ಪ ಸಂಖ್ಯಾತರಿಂದಲೇ. ಆಸೆ
ಯುಸಿರನ್ನು ಸರಾಗವಾಗಿ ಸಹಜವಾಗಿ ಆಡಿಸುವುದಕ್ಕೆ ಯಾರಿಗೆ ಬೇಕಿಲ್ಲ ?
ಇಂಗ್ಲೆಂಡ್ ಮುಂತಾದ ದೇಶಕ್ಕೆ ಕೆಮ್ಮಲು ನೆಗಡಿ, ಅಮೇರಿಕಾ ಮೊದಲಾದ
ವುಗಳಿಗೆ ಒಂದು ತೆರದ ಮೇಲುಬ್ಬಸ, ಜರ್ಮನಿ ಮುಂತಾದವುಗಳಿಗೆ ಕಿಬ್ಬೊಟ್ಟೆ
ಕಟ್ಟಿಹೋಗಿ ಸರಿಯಾಗಿ ಉಸಿರಾಡುತ್ತಿಲ್ಲ, ನಮ್ಮ ದೇಶಕ್ಕೆ ಒಂದು ತೆರದ
ಕ್ಷಯ ಬಂದಿದೆಯೋ ಎಂಬ ಭಯ, ರಷ್ಯವೇನೋ ಒಂದು ತೆರದ ಕಫದಿಂದ
ನರಳಿ ಈಗ ಚೇತರಿಸಿಕೊಳ್ಳುತ್ತಿದೆ. ಹೀಗೆ ಈ ಕೋಶ ನೀರೋಗವಾಗಿ
ತನ್ನಿಷ್ಟಕ್ಕೆ ತಾನು ನಡೆದುಕೊಳ್ಳುವವರೆಗೂ ಯಾರಿಗೂ ನೆಮ್ಮದಿಯಿಲ್ಲ.
ಎಲ್ಲರಿಗೂ ಊನವಾಗಿರುವ ಈ ಅಂಗದ ಮೇಲೆಯೇ ಗಮನವಾಗಿ ರೋಗಿ
ಷ್ಠರ ಹಾಹಾಕಾರ, ವೈದ್ಯರ ಮದ್ದಿನ ಗದ್ದಲ ಹೆಚ್ಚಾಗಿಬಿಟ್ಟಿದೆ. ಈ ಅಂಗ
ನಿನಗಿಲ್ಲ—ಅದಕ್ಕೆ ಸಹಜವಾದ ವ್ಯಾಧಿವಿಶೇಷಗಳೂ ನಿನಗಿಲ್ಲ. ರಾಮನ
ಅರ್ಥಕೋಶವೂ ದುರ್ಬಲವಾದದ್ದೇ—ಆತನ ಆತ್ಮ ಸರಿಯಾಗಿ ಶ್ವಾಸವಾಡು
ತ್ತಿಲ್ಲ. ಆ ನಾಲ್ವರು ಐವರದು ಅವನದಕ್ಕಿಂತ ದುರ್ಬಲ. ಈ ಹಲಸಿನ
ಹಣ್ಣಿನ ವಿಷಯದಲ್ಲಿ ಆತನಾಸೆಯುಸಿರು ಕಟ್ಟಿಹೋಗಿತ್ತು. ಇದು ಕುಂಭ
ಕದ ಸ್ಥಿತಿ. ಯೋಗಿಗಳಿಗೆ ವಿನಾ ಉಳಿದವರು ಎಷ್ಟುಹೊತ್ತು ಪ್ರಾಣಾ
ಯಾಮ ಮಾಡಿಯಾರು ? ನನ್ನ ಬಳಿ ಇದ್ದ ಆ ಎರಡು ಆಣೆ ನಿಶ್ವಾಸ
ಕ್ರಿಯೆಯನ್ನು ನಡೆಯಿಸಿ ಆತನಿಗೆ ಬಹು ಆಪ್ಯಾಯನವನ್ನು ಕೊಟ್ಟಿತಣ್ಣ.
ದುಡ್ಡು ಗಾಳಿಯ ಹಾಗೆ ನಮ್ಮ ಅರ್ಥಕೋಶದ ಮೂಲಕ ಸಂಚರಿಸದೆ
ನಮಗೆ ಆತ್ಮಾರೋಗ್ಯವಿಲ್ಲಪ್ಪ. ನಾನು ಹೇಳಿದ್ದೇನಾದರೂ ತಿಳಿಯಿತೆ ಗೂಳಿ,”
ಎಂದೆ ನಾನು.

ನನಗೆ ಈ ವೇಳೆಗೆ ಸುಸ್ತಾಗಿತ್ತು. ಈಜುವುದಕ್ಕೆ ಆಗತಾನೆ ಕಲಿತವನು
ನೀರಿಗೆ ಬಿದ್ದು ಕೈಕಾಲು ಬಡಿದು ಸದ್ಯ ದಡಕ್ಕೆ ಬಂದು ಸೇರಿದೆವೇ
ಎನ್ನುವ ಸ್ಥಿತಿಗೆ ಬಂದಿದ್ದೆ ನಾನು ಈ ಅರ್ಥಶಾಸ್ತ್ರ ಸರೋವರ ವ್ಯಾಯಾಮ
ದಿಂದ. ಇನ್ನು ಗೂಳಿಗುಳಿದಿದ್ದುದು ಎರಡೇ ಕೀತು; ನನ್ನ ಬಳಿಯಲ್ಲಿದ್ದ
ದೊಂದು, ಅದರ ಹತ್ತಿರದಲ್ಲಿದ್ದುದೊಂದು. ನನ್ನ ಮಾತಿಗಿಂತ ನನ್ನ ಕೈಚಳಕ
ಅದಕ್ಕೆ ಹಿತವಾದಂತೆ ತೋರಿತು. ಆ ಒಂದು ಚೂರನ್ನು ಅದು ಬಾಯಲ್ಲಿ
ಕಚ್ಚಿಕೊಂಡು ಅಗಿಯುತ್ತಾ ನನ್ನಲ್ಲಿದ್ದ ಮತ್ತೊಂದು ಚೂರನ್ನು ನೋಡಿ
ಮುಂಗಾಲಿತ್ತಿ ನೆಲವನ್ನು ಕೆರೆದು ಗೋಣನ್ನಲ್ಲಾಡಿಸಿತು. ನನ್ನ ಕೈಚಳಕ
ಗಳ ಚಮತ್ಕಾರಕ್ಕೆ ಅದು ಮೋಹಗೊಂಡಿರಬೇಕು. ಅದು ಬಾಲ ಬೀಸಿ
ಕೊಂಡಿದ್ದನ್ನು ನೋಡಿದರೆ ಅದಕ್ಕೆ ನೊಣದ ಬಾಧೆ ಹೆಚ್ಚಾಗಿ ಆಗಿರಬೇ

ಕೆಂದು ತೋರುತ್ತದೆ. ಮುಂಗಾಲು ಕೆರೆತವನ್ನು ನೋಡಿದರೆ "ನಿನ್ನಂತೆ ಕೈ ನನಗಿಲ್ಲವಲ್ಲಾ" ಎಂಬ ವ್ಯಥೆ ದ್ಯೋತವಾಗುತ್ತದೆ. "ನಾನೇನು ಮಾಡಲಪ್ಪಾ; ಆಗಲೇ ಹೇಳಿದ ಹಾಗೆ ಇದು ನಿನ್ನ ಪೂರ್ವಾರ್ಜಿತ ಕರ್ಮ. ಈ ನೆಲಕ್ಕೆ ನೀನು ಮುಂಚೆ ಬಂದೆಯೋ ನಾನು ಮುಂಚೆ ಬಂದೆನೋ ಗೊತ್ತಿಲ್ಲ. ನನಗೂ ನಿನ್ನ ಹಾಗೆ ಜೀವಂತನಾಗಿರಬೇಕೆಂದಾಸೆ. ಆದರೆ ಹಿಂದೆ ಅಂದು ನನಗೆ ನಿಮ್ಮಂಥವರಿಂದ ಬಹು ಭಯವಾಗಿರಬೇಕಣ್ಣ. ಬಂಡೆ ಮೇಲೇರಿಕೊಳ್ಳುವುದಕ್ಕೆ, ಮರದ ಮೇಲೆ ಹತ್ತುವುದಕ್ಕೆ ನನಗೆ ಉತ್ಕಟೇಚ್ಛೆಯಾಗಿ ಈ ಅಂಗಗಳೂ ಈ ನಿಲುವಿಕೆಯೂ ಕ್ರಮೇಣ ದೊರೆತಿರಬೇಕಪ್ಪಾ. ಆಮೇಲೆ ಈ ತೀವ್ರಭಯ ಹೆಪ್ಪುಗಟ್ಟಿ ಹರಳಾಗಿ ಧೈರ್ಯ ಬಂದು ನನ್ನ ಈ ರೂಪ ಸ್ಥಿರಪಟ್ಟು ನಾನು ನೆಲದಮೇಲೆ ನಿಂತೆ. ಇದ್ದಿಲು ಕಪ್ಪು, ವಜ್ರ ಹೊಳಪು; ಭಯ ಕಪ್ಪು, ಧೈರ್ಯ ಹೊಳಪು. ಎರಡಕ್ಕೂ ಒಂದೇ ಮೂಲವಸ್ತು—ಜೀವದಾಶೆ. ಈಗ ಈ ಕೈಯಿಂದ ಯಾವ ಪ್ರಾಣಿಯನ್ನಾದರೂ ಜಯಿಸಬಲ್ಲೆ. ಎಲ್ಲಿ ನವೆಯಾದರೂ ಅಲ್ಲಿ ಕೆರೆದುಕೊಳ್ಳಬಲ್ಲೆ. ನಿನ್ನ ಭಯ ಆಸೆ ಬೇರೆ ಜಾಡು ಹಿಡಿಯಿತು. ಈಗ ನೀನು ನನ್ನ ಅಧೀನ. ನಿನ್ನ ಹಿಳಿಲಿನ ನವೆಯನ್ನು ನೀನೇ ಕೆರೆದುಕೊಳ್ಳಲಾರೆ. ನೀನು ಹಾಯದಿದ್ದರೆ ನಾನು ಕೆರೆಯುತ್ತೇನೆ" ಎಂದೆ ನಾನು. ಬಸವ "ಹ್ಞೂ ಏನೂ ಮಾಡುವುದಿಲ್ಲ ಬಾ—ಸ್ವಲ್ಪ ಕೆರೆ" ಎನ್ನುತ್ತಲೂ ನನಗೆ ಸಂತೋಷವಾಯಿತು. ಇದರ ಹಿಳಿಲನ್ನು ತುರಿಸಬೇಕೆಂದು ನನಗೆ ಬಹಳ ದಿನಗಳಿಂದಲೂ ಆಸೆಯಿತ್ತು. ಈಗ ಅದು ತೀರುವುದಕ್ಕೆ ಬಂತು. ನಿಜವಾಗಿ ಈದಿನ ಸುದಿನ—ತೇಂಗೊಳಲು ಹೋದರೆ ಹೋಗಲಿ ಎಂದುಕೊಂಡು ನನ್ನ ಕೈಯಲ್ಲಿದ್ದ ಕೀತನ್ನು ಮುಂದು ಮಾಡಿಕೊಂಡು, ಅದರ ಮುಂದೆ ಮೆಲ್ಲಮೆಲ್ಲಗೆ ಹೆಜ್ಜೆಯಿಟ್ಟೆ. ಬಸವ ಸ್ನೇಹಭಾವವನ್ನೇ ತೋರಿತು. ತೋರದೆ ಏನುಮಾಡೀತು—ನನ್ನ ಹಾಗೆ ತೊಳೆಗೂಡಿದ ಹಲಸಿನ ಕೀತನ್ನು ಅದಕ್ಕೆ ಇದುವರೆಗೆ ಯಾರು ತಿನ್ನಿಸಿದ್ದಾರೆ? ನಾನು ಹುಷಾರಾಗಿ ಅದರ ಪಕ್ಕಕ್ಕೆ ನಿಂತುಕೊಂಡು ನನ್ನ ಒಂದು ಕೈಯಿಂದ ಅದಕ್ಕೆ ಹಲಸಿನ ಸಿಪ್ಪೆಯನ್ನು ತಿನ್ನಿಸುತ್ತಾ ಇನ್ನೊಂದು ಕೈಯಿಂದ ಅದರ ಹಿಳಿಲನ್ನು ಕೆರೆಯುತ್ತಾ ಮೈಯನ್ನು ಸವರುತ್ತಾ ವಿಚಿತ್ರವಾದ ಸ್ಪರ್ಶಸುಖವನ್ನು ಪಡೆದೆ. ನಾನು ಹೀಗಿರುವಾಗ ಓಣಿಯ ಬಾಗಿಲಿನಲ್ಲಿ ನನ್ನ ತಮ್ಮ ಮತ್ತು ತಾಯಿ, ಕೈಮುಸುಕಿನಲ್ಲಿ ಗುಡಿಯ ವಿನಿಯೋಗವನ್ನು ಹಿಡಿದುಕೊಂಡು ಬಂದು ನಿಂತಿದ್ದರು. ನನ್ನನ್ನೂ ಈ ಗೂಳಿಯನ್ನೂ ಅವರು ನೋಡಿ ಶಿರ ಬೆಕ್ಕಸ ಬೆರಗಾಗಿರಬೇಕು. ತುಸಹೊತ್ತು ಸ್ತಬ್ಧರಾಗಿ ನಿಂತಿದ್ದು

